ತೊದಲ್ನುಡಿ ಗ್ರಂಥಮಾಲೆ-ನುಡಿ ೨೧

# ನಗೆನೋಟಗಳು

(೧೧ ಜೀವನ ಚಿತ್ರಗಳ ಸಂಗ್ರಹ)

ಕೆ. ವಿಟ್ಠಲ ಶೆಣೈ, ಬಿ. ಎ. ಎಲ್. ಟಿ.

೧—೪—೦



…ಯರ ಪ್ರಪಂಚ
ಉಡುಪಿ

ಕಣ್ಮರೆಯಾಗಿರುವ
ನಲ್ಮೆಯ ತಾಯಿ
**ಸರಸ್ವತಿಗೆ**

## ನಿವೇದನ

ಈ ಪುಸ್ತಕದಲ್ಲಿ ಸಂಗ್ರಹವಾದ ಲೇಖಗಳೆಲ್ಲ ಉಡುಪಿಯ 'ಧುರೀಣ' 'ಅಂತರಂಗ' ಮತ್ತು 'ಪ್ರಕಾಶಿನಿ' ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ಇವುಗಳ ಪುನರ್ಮುದ್ರಣಕ್ಕೆ ಸಮ್ಮತಿಯಿತ್ತ ಪತ್ರಿಕೆಗಳ ಒಡೆಯರಿಗೆ ಮತ್ತು ಪುಸ್ತಕ ಪ್ರಕಾಶನದಲ್ಲಿ ನೆರವಾದ ಉಡುಪಿಯ 'ಕಿರಿಯರ ಪ್ರಪಂಚ'ದ ಗೆಳೆಯರಿಗೆ ನಾನು ಆಭಾರಿ. ಪುಸ್ತಕದ ವಿಮರ್ಶೆಮಾಡಿ, ಅದರಲ್ಲಿರುವ ಗುಣದೋಷಗಳು ಬಗೆಗಾಣುವಂತೆ ಮುನ್ಮಾತನ್ನು ಬರೆದು, ಹರಸಿ, ಹುರಿದುಂಬಿಸಿದ ಗುರುವರ್ಯ ಶ್ರೀ. ಮುಳಿಯ ತಿಮ್ಮಪ್ಪಯ್ಯ-ಅವರಿಗೆ ನಾನು ಚಿರಋಣಿ. ಸಹೃದಯರಾದ ವಾಚಕರು ಬಾಳಿನ ದಣಿವನ್ನು ಮರೆತು, ಒಂದೆರಡು ತಾಸುಗಳನ್ನಾದರೂ ಆನಂದದಿಂದ ಕಳೆಯುವಂತಾದರೆ ಶ್ರಮವಿದು ಸಾರ್ಥಕ.

ಲೇಖಕ.—

ಮುದ್ರಕರು
**ನವಯುಗ ಪ್ರೆಸ್,**
ಉಡುಪಿ.

## ಮುನ್ಮಾತು

ಇದು "ನಗೆನೋಟ" ಎಂಬ ಹೆಸರಿನ ಲೇಖಗಳ ಗೊಂಚಲು. ಬರೆದವರೆಂದರೆ ನನ್ನ ಹಿಂದಿನ ಕಿರಿಯ ಗೆಳೆಯರಾದ ಶ್ರೀ ಕೆ. ವಿಟ್ಠಲ ಶೆಣಯಿ, ಬಿ. ಎ. ಎಲ್. ಟಿ. ಯವರು. ಇವರೀಗ ಉಡುಪಿ ಬೋರ್ಡು ಹೈಸ್ಕೂಲಿನಲ್ಲಿ ಅಧ್ಯಾಪಕರಾಗಿರುತ್ತಾರೆ. "ತನ್ನ ಪ್ರಥಮ ಪ್ರಯತ್ನಕ್ಕೆ ನೀವೇ ಒಂದು ಮುನ್ನುಡಿಯನ್ನು ಬರೆದು ಕೊಡಿಸಬೇಕು" ಎಂದು ಕೇಳಿದುದಕ್ಕೆ ಅನುವಾಗಿ ಈ ಮುನ್ಮಾತು.

ಹನ್ನೊಂದು ಲೇಖನಗಳಿಂದ ಕೂಡಿ ೧೦೫ ಪುಟಗಳನ್ನೊಳಗೊಂಡ ಕಿರಿಟಾಕಾರ (Crown size)ದ ಪುಸ್ತಕವಿದು. ಕ್ರಮವಾಗಿ (೧) ಮಿತ್ರ ಭೋಜನ, (೨) ಮಾಯೋತಿ, (೩) M-353, (೪) ಸಾಹಿತ್ಯಕೂಟ, [೫) ವಿಜಯ, (೬) ಟೀಪಾರ್ಟಿ, (೭) ಸುಧಾರಣೆಯ ಸೋಗಿನಲ್ಲಿ, (೮) ಸ್ವರ್ಗದಲ್ಲಿ ನಾರ್ಣಪ್ಪ, (೯) ಚರಂಡಿಯ ಕತೆ, (೧೦) ಎಮ್. ಸಿ. (೧೧) ಕತೆಗಾರ ಎಂಬವುಗಳೆ ಈ ಲೇಖಗಳ ಹೆಸರುಗಳು. ಇವೆಲ್ಲವೂ ಸ್ವತಂತ್ರಗಳಾಗಿ ಬರೆದರೂ ಆಕರ್ಷಕಗಳೆನ್ನಿಸಿರುವುದರಿಂದ ಶ್ರೀ ಶೆಣಯಿಯವರ ಪ್ರಥಮ ಪ್ರಯತ್ನಕ್ಕೆ ಕಳೆಯನ್ನುಂಟು ಮಾಡಿವೆ. ಶ್ರೀ ಶೆಣಯಿಯವರು ನನ್ನ ಚಿರಂಜೀವಿ ಮಿತ್ರರಾಗಿದ್ದರೂ ಮನಸೊಪ್ಪದ ಕೃತಿಗೆ, ಹೊಗಳಿ ಮುನ್ನುಡಿಯನ್ನು ಬರೆವಾತನು ನಾನಲ್ಲವೆಂಬುದು ಅವರಿಗೇ ಗೊತ್ತಿದೆ. ಅದನ್ನರಿತಿದ್ದರೂ, ಆತ್ಮವಿಶ್ವಾಸದಿಂದ, ನ್ಯೂನತೆ ಏನಾದರೂ ಇದ್ದರೆ ಅದನ್ನು ಹಿರಿಯರ ಬಾಯಿಂದಲೇ ತಿಳಿದುಕೊಳ್ಳಬೇಕು, ಎಂಬ ಈಗಲೂ ಅವರೆದೆಯನ್ನು ತೊಲಗದ ಸುಗುಣದಿಂದ ಈ ಕೆಲಸಕ್ಕೆ ನನ್ನನ್ನೇ ಒತ್ತಾಯಿಸಿದರು. ಇದನ್ನರಿತ ಮೇಲೆ "ಮನವಿಲ್ಲದ ಮನ" ದಿಂದಾದರೂ ಈ ಕಾರ್ಯಕ್ಕೆ ಒಪ್ಪಬೇಕಾಯಿತು.

ಇದೊಂದು ಲಘು ಸಾಹಿತ್ಯ. ಈಗಿನ ಕಾಲದಲ್ಲಿ ಇಂಥ ಲಘು ಸಾಹಿತ್ಯಗಳ ಭಾಷೆಯೊಡನೆ ವಿಷಯ-ಯೋಜನಾಪದ್ಧತಿಗಳೂ ಸಹ ಹೆಚ್ಚಾಗಿ ಸಂದರ್ಭ ಸನ್ನಿವೇಶಗಳನ್ನೂ ಮೀರಿ-ಲಘುತರಗಳಾಗಿ, ತಮಗಳಾಗಿ ಹೋಗಿಬಿಡುವುದನ್ನು ಅಲ್ಲಲ್ಲಿ ನೋಡುತ್ತೇವೆ. ಅಂಥವುಗಳಿಂದ ಸಾಹಿತ್ಯದೊಳಗೆ ಹೊಸ ಹುರುಪು ಹರಿಯಲಾರದೆಂದೇ ನನ್ನ ಭಾವನೆ. ಇಂಥ ಹುರುಪು, ಕೃತಿಕಾರನ ವಿಶುದ್ಧ

ಭಾವನೆಯೇ, ನುಡಿ-ನುಡಿಗಟ್ಟು ಗಾದೆಗಳಿಂದ ಕೂಡಿ ಅಲ್ಲಲ್ಲಿಗನುವಾದ ರ
ಯಿಂದ ಬೆರೆದು "ಶೈಲಿ" ಎನ್ನಿಸಬೇಕು. ಶ್ರೀ ಶೆಣೈಯವರ ಲೇಖನಿಂ
ಅಂಥ ವಿಶುದ್ಧ ಕನ್ನಡ ಶೈಲಿ ರೂಪಿಸುತ್ತಿದೆ; ಯಾಕೆ? ರೂಪಿಸಿದೆ ಎನ್ನಬೇ
ಅನ್ಯ ಭಾಷೆಯೇ ಮನೆಮಾತಾದ ಈ ಪ್ರಾಂತ್ಯದೊಳಗಿನ ಈಗಿನ ಸುಸಂಸ್ಕ
ರೆನ್ನಿಸಿದ ಹಲವರ ಶೈಲಿಯಾದರೂ ಈ ಬಗೆಯ ಸುಮಾರ್ಗವನ್ನೊಂದಿದುದ
ನಾನು ಕಂಡುದು ಕಡಿಮೆ. "ತಮ್ಮ ಮನೆಮಾತು ಕನ್ನಡವಲ್ಲ" ಎಂದು
ಸುಲಭವಾಗಿ ಕನ್ನಡದಲ್ಲಿ ಅಲಸರಾಗಿ ಬಿಡುವ ನಮ್ಮ ಕನ್ನಡ ನಾಡಿನವ
ಇದೊಂದು ಕೈಗನ್ನಡಿ. ನಮ್ಮ ಮನೆಮಾತು ಇಂಗ್ಲಿಷೇನು? ನಮ್ಮ ರಾ
ಭಾಷೆಯಾದ ಹಿಂದಿಯಲ್ಲೇನೋ ನನಗೆ ಮನಃಪೂತವಾದ ಪೂಜ್ಯ ಭಾವನಿ
ಅದಾದರೂ ಇಲ್ಲಿ ಎಷ್ಟು ಮಂದಿಯ ಮನೆಮಾತಾಗಿದೆ? ಮಾತೃಭಾ
(Mother-tongue)ಯಿಂದಲೆ ಸಾರ್ವಜನಿಕ ವಿದ್ಯಾಭ್ಯಾಸವಾಗಬೇಕ
ಎಂಬ ಇಂಗ್ಲಿಷಿನಿಂದಲೆ ಎತ್ತಿಕೊಂಡ ಮಾತು ನಮ್ಮ ಈ ನಾಡಿನಲ್ಲಿ ವ್ಯ
ಗಲಭೆಯನ್ನೆಬ್ಬಿಸಿದೆ ಎಂದೇ ನನ್ನ ಭಾವನೆ. ನಮ್ಮಲ್ಲಿ „ದೇಶಭಾಷೆ"ಎಂಬು
ರೂಢವಾಗಿತ್ತಲ್ಲದೆ "ಮಾತೃಭಾಷೆ" ಎಂದಲ್ಲ. ಇಂಗ್ಲಿಷಿನಲ್ಲಾದರೂ ಅದ
„ಮಾತೃಭೂಮಿಯ ಸಾರ್ವಜನಿಕ ಭಾಷೆ" ಎಂಬ ಅರ್ಥವೇ ಇರಬೇಕು. ಬ
ಲಾಗಿ ಶುದ್ಧ "ಮಾತೃವಿನ ಭಾಷೆ" ಎಂದಾದರೆ ಪ್ರಪಂಚದೊಳಗಿನ ಹಲ
ಮಕ್ಕಳಿಗೆ ಸಾರ್ವಜನಿಕ ವಿದ್ಯಾಭ್ಯಾಸವೆಂಬುದು ಅಸಾಧ್ಯವೆಂದೇ ತೋರುತ್ತಿ
ನಮ್ಮ ಕನ್ನಡ ನಾಡಿನೊಳಗೆ ಕೆಲವೆಡೆ ತಾಯಿಯ ಮಾತು ಮರಾಠಿಯಾ
ಮರಾಠ ದೇಶದಲ್ಲಿ ತಾಯಿಯ ಮಾತು "ಕನ್ನಡ"ವಾಗಿರುವುದನ್ನು ಕಾಣುತ್ತೇ
ಇದು ಒಂದೆರಡು ಒಳನಾಡುಗಳವಲ್ಲ; ಭರತಭೂಮಿಗೆ ಮಾತ್ರ ಮೀಸಲಾದುದ
ಅಲ್ಲ; ಆದಿಯಿಂದಲೂ ನಡೆದುಬರುತ್ತಿರುವ ಇಡೀ ಪ್ರಪಂಚದ ಅನ
ಅದರಿಂದ 'ಮಾತೃಭಾಷೆ' ಎಂದರೆ ಮೇಲೆ ಕೊಟ್ಟ ಟಿಪ್ಪಣಿಯೇ ಸಾಧುವೆಂ
ನನ್ನ ನಿಶ್ಚಿತ ಭಾವನೆ. ಆ ಭಾವನೆಗನುವಾಗಿಯೇ ಈ ವರೆಗೆ ನಡೆದುಬಂದುದ
ಸಂದರ್ಭವನ್ನು ವಿವೇಚಿಸಿದರೂ ಆ ಪದ್ಧತಿಯೇ ವಿವೇಕಬದ್ಧವಾದುದು ಎ
ಬೇಕು. ಹಿಂದಿನಿಂದಿಂದಿನ ವರೆಗಿನ ಈ ನಾಡಿನ ಹೆಚ್ಚಾದ ಕವಿಗಳೆಲ್ಲ ತೆ
ವರು; ಕೆಲಗಾಲದಿಂದಿತ್ತಣವರೊಳಗೆ ಹಲಮಂದಿ ಕೊಂಕಣ ಭಾಷೆಯವ
ಇದೂ ಮೇಲಿನ ಹೇಳಿಕೆಗೆ ಪ್ರಬಲವಾದ ಆಧಾರವು.

ಸಂದರ್ಭಾನುಸಾರವಾಗಿ ಇಷ್ಟೊಂದು ಸೂಚಿಸಬೇಕಾದುದಕ್ಕೆ ವಾಚಕರು
ುಸಬಹುದು. ಈ ಪುಸ್ತಕದೊಳಗಿನ ೪ನೆಯ "ಸಾಹಿತ್ಯಕೂಟ"–೬ನೆಯ
ೀಪಾರ್ಟ" ಎಂಬವುಗಳು ಇನ್ನಷ್ಟು ವಿಷಯಗಳನ್ನು ತುಂಬಿದಲ್ಲಿ ಹೆಚ್ಚಿಗೆ
ದವಾಗುತ್ತಿದ್ದುವು. ೩ನೆಯ M-353 ಎಂಬುದು ಅಂತ್ಯದೊಳಗೆ ಬಂದಿಷ್ಟು
ನವೆನ್ನಿಸಿಬಿಟ್ಟದೆ ಎಂದು ನನ್ನ ಭಾವನೆ. ಕಡೆಯಣ ಕಥಾಭಾಗವನ್ನು
ಲಕನು ತಾನೇ ಹೇಳದೆ, ಸಂದರ್ಭಪೂರ್ವಕವಾಗಿ ಚಿತ್ರಿಸಬೇಕಾಗಿತ್ತು.
ಾದ್ದರೆ ಇನ್ನಷ್ಟು ಅಂದವೂ ಆಗಬಹುದಿತ್ತು. ೨ನೆಯ "ಮಾಯೋತಿ"
ಯ "ವಿಜಯ", ೭ನೆಯ "ಸುಧಾರಣೆಯ ಸೋಗಿನಲ್ಲಿ", ೯ನೆಯ "ಚರಂಡಿಯ
", ೧೧ನೆಯ "ಕತೆಗಾರ" ಇವುಗಳು ವಿನೋದದೊಡನೆ ಬೋಧಪ್ರದಗಳೂ
ವೆ. ೧ನೆಯ "ಮಿತ್ರಭೋಜನ"–೮ನೆಯ "ಸ್ವರ್ಗದಲ್ಲಿ ನಾರ್ಣಪ್ಪ", ೧೦ನೆಯ
ಮ್. ಸಿ." ಎಂಬ ಮೂರು ಎಲ್ಲವುಗಳಿಗಿಂತಲೂ ಹೆಚ್ಚಿಗೆ ರಮಣೀಯ
ಾಗಿವೆ. ; ಕುತೂಹಲದ ತೆರೆಯಲ್ಲಿ ತೇಲಿಸುತ್ತಿವೆ; ಭಿನ್ನ ಭಿನ್ನ ವ್ಯಕ್ತಿಗಳ ಬೇರೆ
ರೆ ಸ್ವಭಾವಗಳನ್ನು ಕನ್ನಡಿಯಿಟ್ಟು ಹೊಳೆಯಿಸುತ್ತಿವೆ.

ಶ್ರೀ ಶೆಣಯಿಯವರದಿದು ಪ್ರಥಮ ಪ್ರಯತ್ನ. ಇದೇ ಈ ಮಟ್ಟದಲ್ಲಿ
ರುದನ್ನು ನೋಡಿದರೆ ಮುಂದಿನ ಸಾಹಿತ್ಯವಾಹಿನಿ ಎಷ್ಟು ಸಾರವತ್ತಾಗಿ
ರೆದೆಯಿಂದ ಹರಿಯಬಹುದು ಎಂಬುದನ್ನು ಮಾನ್ಯ ವಾಚಕರು ಭಾವಿಸಿ
ಳ್ಳಬಹುದು. ಇಂಥ ಕಿರಿಯ ಸಾಹಿತಿಗಳನ್ನು ಕನ್ನಡಿಗರು ಹರಸಿ
ೀತ್ಸಾಹಿಸುವುದು ಅವರ ಧರ್ಮವೆಂದು ನೆನಪರಿಕೆಗೊಳಿಸುತ್ತೇನೆ.

ಮುಳಿಯ ತಿಮ್ಮಪ್ಪಯ್ಯ.

---

"ನಗೆನೋಟಗಳ'ನ್ನು ನಮ್ಮ ಗ್ರಂಥಮಾಲೆಯಲ್ಲಿ ಪ್ರೋಣಿಸಿಕೊಳ್ಳಲು
ುತಿಯನ್ನಿತ್ತ ತರುಣ ಸಾಹಿತಿ ಶ್ರೀ ಕೆ. ವಿ. ಶೆಣೈಯವರಿಗೆ "ಕಿರಿಯರ
ಂಚ"ವು ಅತ್ಯಂತ ಉಪಕೃತವಾಗಿದೆ.

# ಪರಿವಿಡಿ

೧

# ಮಿತ್ರ ಭೋಜನ

ಕ್ರಿ. ಶ. ೧೯೦೫ನೆಯ ಇಸವಿಯ ಆರಂಭ. ಹೊತ್ತು ನೆತ್ತಿಗೇರಿತ್ತು. ನೆರೆಯೂರಿಗೆ ಎಮ್ಮೆ ಗೊತ್ತುಮಾಡಲು ಹೋದ ಶೀನಪ್ಪನು ರಣರಣ ಬಿಸಿಲಿನಲ್ಲಿ, ಅವಸರವಸರವಾಗಿ ಕಾಲ್ದೆಗೆಯುತಿದ್ದ. ಧೋತ್ರದಲ್ಲಿ ಅನುಕರಣೀಯವಲ್ಲದ ಪಂಚಕಚ್ಚೆ. ಮುಂಡದಲ್ಲಿ ಏಳೆಂಟು ವರ್ಷ ಪ್ರಾಯದ ಕಪ್ಪುಕೋಟು. ಮೊಣ-ಕಾಲುಗಳ ವರೆಗೆ ಕೆಳಗಿಳಿದ ಶಾಲು. ಸಿಪ್ಪೆಸುಲಿದ ಎಳೆ ಅಡಿಕೆಯಂತೆ ಬೋಳು ತಲೆ ಬಿಟ್ಟು, ಕೊಡೆ ಹಿಡಿದು ಕೊಂಡು ಶೀಪ್ಪನು ತನ್ನ ಮನೆಯ ಅಭಿಮುಖವಾಗಿ ನಡೆಯುತ್ತಿದ್ದ.

ದಾರಿಯಲ್ಲಿ ಮಾಧವರಾಯರ ಮನೆಯಿತ್ತು. ಅಲ್ಲಿ ಆ ದಿನ, ಕೆಲವು ಮಕ್ಕಳು ಜಗಲಿಯ ಮೇಲೆ ಕಂಬದಾಟವಾಡುತಿದ್ದುವು. ಒಳಗಡೆ ಮಡಿ ಯುಟ್ಟ ಕೆಲವು ಮಹನೀಯರು ಕಾರ್ಯಾತುರದಿಂದ ಅಡ್ಡಾಡುತಿದ್ದರು. ಬಾಗಲಿನ ಪಕ್ಕದ ಕಿಟಕಿಗಳ ಒಳಗಿಂದ ಶೀನಪ್ಪನು ಇವನ್ನೆಲ್ಲಾ ಕಂಡ. 'ರಾಯರಲ್ಲೇನೊ ಭೋಜನವಿರಬೇಕು' ಎಂದು ಅವನಿಗೆ ಸಂದೇಹ ವಾಯಿತು. 'ಹಾಗೆ ವಿಶೇಷಗಟ್ಟಲೆಯಾದರೆ ತನಗೆ ಆಮಂತ್ರಣ ಬಾರ ದಿರುತಿತ್ತೇ?' ಎಂದವನು ತನ್ನನ್ನೇ ಪ್ರಶ್ನಿಸಿಕೊಂಡ. ಪ್ರಾಯಶಃ ಮನೆಗೆ ಆಮಂತ್ರಣ ಮುಟ್ಟಿರಬೇಕು. ಊಟದೊರೆತರೆ ಹೀಗೆ ಅನಿರೀಕ್ಷಿತ ವಾಗಿಯೇ ದೊರಕಬೇಕು' ಎಂದು ಮನಸ್ಸಿನಲ್ಲಿ ಮಂಡಿಗೆಯುಣ್ಣುತ್ತ ಶೀನಪ್ಪನು ಮನೆಗೆ ಬಂದ.

ಬಂದವನೆ, ಅಡುಗೆ ಮನೆಯಲ್ಲಿ ಒಗ್ಗರಣೆಯ ಸದ್ದು ಕೇಳಿದ.

"ಯಾರೇ ಅಲ್ಲಿ?" ಕೂಗಿದ ಶೀನಪ್ಪ.

'ಬಂದಿರಾ?" ಆ ಕಡೆಯಿಂದ ಹೆಂಡತಿಯ ರಾಗ ಹೊರಟಿತು. 'ಬರುವಾಗ ಎರಡಾಗುತ್ತದೊ, ಮೂರಾಗುತ್ತದೊ ಎಂದಿದ್ದೆ."

"ಕೆಲಸ ಮುಗಿಯಿತೆಂದರೆ ಮತ್ತೆ ನಿಲ್ಲುವುದುಂಟೆ?" ಶೀನಪ್ಪನು ಶಾಲು ತೆಗೆದಿಡುತ್ತ ಹೇಳಿದ. "ಹೌದು ಕಣೆ, ಮಾಧವರಾಯರಲ್ಲೇ ನದು ಗೌಜಿ?"

"ಯಾಕೆ?"

"ನಮಗೆ ಆಮಂತ್ರಣ ಬರಲಿಲ್ಲವೆ?"

"ಏನಂತೆ ಅವರಲ್ಲಿ?"

"ಏನೋ ಭೋಜನವಿದೆಯೆಂಬ ಹಾಗೆ ತೋರಿತು. ನಿಜವಾಗಿಯೂ ನಮಗೆ ಹೇಳಲಿಲ್ಲವೆ?"

"ಇಲ್ಲ, ನಾನರಿಯೆ. ನನ್ನೊಡನೆ ಊಟಕ್ಕೆ ಹೇಳಿದವರೇ ಇಲ್ಲ. ಊಟವಿದೆಯೆಂಬ ವರ್ತಮಾನವೂ ನನಗೆ ತಿಳಿದಿರಲಿಲ್ಲ."

ಸರಿ! ಇಷ್ಟರ ವರೆಗೆ ಶೀನಪ್ಪನು ಕಟ್ಟಿತಂದ ಆಸೆಯ ಬುತ್ತಿಯು ಧಸಕ್ಕನೆ ಬಿದ್ದು ಮಣ್ಣು ಪಾಲಾಯಿತು. ಅವನು ನಿರಾಶೆಯ ಒಂದು ನಿಟ್ಟುಸಿರಿಟ್ಟು, ಉಡಿಗೆತೊಡಿಗೆಗಳನ್ನು ಕಳಚಿಡತೊಡಗಿದ. ಬೈರಾಸಿನಿಂದ ಹಣೆಯ ಬೆವರನ್ನೊಮ್ಮೆ ಒರಸಿ ತೆಗೆದ. ಮತ್ತು ಸ್ನಾನಕ್ಕೆಂದು ಬಚ್ಚಲು ಕೊಟ್ಟಗೆಗೆ ಹೊರಟ. ಅಷ್ಟರಲ್ಲಿ ಅವನ ಹೆಂಡತಿಗೇನೊ ನೆನಪಿಗೆ ಬಂತು.

"ಓಹೊ, ತಿಳಿಯಿತು. 'ಮದ್ರಾಸಿನಿಂದ ಹುಡುಗರು ಬಂದಿದ್ದಾರೆ· ನಮ್ಮಲ್ಲಿಯೂ ಕರೆಸಿ ಊಟ ಮಾಡಿಸಬೇಕೆಂದುಂಟು' ಎಂದು ಮೊನ್ನೆ ಮಾಧವರಾಯರ ಹೆಂಡತಿ ಯಮುನಮ್ಮ ಹೇಳುತಿದ್ದರು. ಅದೇನಾದರು ಈ ಹೊತ್ತೋ ಏನೋ?" ಎಂದು ಆಕೆ ನುಡಿದಳು.

"ಹಾಗಾದರೆ ನಮ್ಮನ್ನೇಕೆ ಆಮಂತ್ರಿಸಲಿಲ್ಲ; ಎಲ್ಲಾದರೂ ಮರೆತಿರಬಹುದೆ?' ಗಂಡನು ಪ್ರಶ್ನಿಸಿದ.

"ಮರೆತಿರಲಿಕ್ಕೂ ಸಾಕು –ದೊಡ್ಡವರ ಮರ್ಜಿಯಷ್ಟೆ!" ಹೆಂಡತಿಯು ಒಂದು ನಂಜಿನ ಮಾತೆಸೆದಳು.

'ಚಿಂತೆಯಿಲ್ಲ, ಬಿಟ್ಟುಬಿಡು-ಎಮ್ಮೆ ಗೊತ್ತಾಯಿತು. ಹದಿನಾಲ್ಕು ವರಹವಂತೆ. ಬೆಳಗ್ಗೆ ಸಾಯಂಕಾಲ ೮ ಕುಡ್ತೆಯಿಲ್ಲದಿದ್ದರೆ ಎಮ್ಮೆ ವಾಪಾಸು ಎಂಬ ಶರ್ತದ ಮೇಲೆ ತಂದಿದ್ದೇನೆ. ಹೇಗೆ?' ಎಂದು ಶೀನಪ್ಪನು ಎಮ್ಮೆಯ ಪ್ರಸ್ತಾಪವೆತ್ತಿದ. ಹೆಂಡತಿಯು ಸೈಗುಟ್ಟಿದಳು. ಅಂತೂ ಶೀನಪ್ಪನು ಸ್ನಾನಮಾಡಲು ಬಚ್ಚಲು ಕೋಣೆಗೆ ಹೋದ.

ಇಷ್ಟಾದರೂ ಅವನ ಮನಸ್ಸಿನಲ್ಲಿ ಅದೇಕೊ ಅಸಮಾಧಾನ. ಮಾಧವರಾಯರ ಭೋಜನದ ಯೋಚನೆಯು ಕುದಿಯುತಿದ್ದುದೆ ಇದಕ್ಕೆ ಕಾರಣ. 'ಅಬ್ಬಾ, ಇವರ ದೊಡ್ಡಸ್ಥಿಕೆಯೆ! ಊರಿನ ಕಾಳ, ಬೋಳರಿಗೂ ಆಮಂತ್ರಣವಿರುವಾಗ ನನ್ನನ್ನು ಮರೆತರಲ್ಲವೆ!!' ಎಂದು ಅವನು ಚಿಂತಿಸತೊಡಗಿದ. ಆ ಅಪಮಾನದ ಉರಿಯು, ಬಚ್ಚಲಿನ ಒಲೆಯ ಬೆಂಕಿಯಂತೆ ಅವನ ಎದೆಯಲ್ಲಿ ಧಗಧಗ ಉರಿಯುತಿತ್ತು. ಹೇಗೂ ಸ್ನಾನ ಸಂಧ್ಯಾವಂದನ, ಜಪತಪಾದಿಗಳನ್ನು ತೀರಿಸಿ, ಊಟ ಮುಗಿಸಿ, ಶೀನಪ್ಪನು ಸುಖ ನಿದ್ರಾಪರವಶನಾದ.

oo oo oo oo

ಎಷ್ಟೋ ವರುಷಗಳ ಹಿಂದಿನ ಕತೆಯಿದು. ಆಗ ನಮ್ಮ ಊರಲ್ಲಿ ಕಾಲೇಜೇ ಇರಲಿಲ್ಲ. ಪ್ರೌಢ ವಿದ್ಯಾಭ್ಯಾಸ ಮಾಡುತ್ತಿದ್ದವರೆಂದರೆ ಹಿರಿಯರ ಆಸ್ತಿಯುಳ್ಳ ಕೆಲವೇ ಶ್ರೀಮಂತ ಹುಡುಗರಾಗಿದ್ದರು. ಅವರಾದರೊ ಎಫ್. ಎ. ಮಾಡಿಸಲಿಕ್ಕೂ ಮದ್ರಾಸಿಗೇನೆ ಹೋಗಬೇಕಾಗಿತ್ತು. ಆದರೆ ಒಂದು ದೃಷ್ಟಿಯಿಂದ, ವಿದ್ಯಾರ್ಥಿಗಳಿಗೆ ಈ ಸ್ಥಿತಿ ಚೆನ್ನಾಗಿತ್ತೆಂದೆ ಹೇಳಬೇಕು. ಅವರು ರಜೆಯಲ್ಲಿ ಊರಿಗೆ ಬಂದರೆಂದರೆ, ಐ. ಸಿ. ಎಸ್. ಪಾಸಾಗಿ ಈಗ ತಾನೆ ಸೀಮೆಯಿಂದ ಮರಳಿದವರಿಗೆ ಸಿಗುವಷ್ಟು ಸಂಭ್ರಮದ ಸ್ವಾಗತವು ಅವರಿಗೆ ಸಿಗುತಿತ್ತು. ನೆರೆಕರೆಯವರಲ್ಲಿ ಸಡಗರದ ಔತಣಗಳೇನು! ವಿನೋದ ಕೂಟಗಳೇನು! ಸಂಗೀತ ಕಚೇರಿಗಳೇನು!! ಒಬ್ಬರು ಕರೆದರೆಂದು ಮತ್ತೊಬ್ಬರು—ಹೀಗೆ ಮೇಲಾಟದಿಂದ, ಅವರನ್ನೆಲ್ಲ ಮನೆಗಳಿಗೆ ಬರಮಾಡಿಸಿ, ಆದರೋಪಚಾರಗಳಿಂದ ಸ್ವಾಗತಿಸುತಿದ್ದರು. ಹೀಗಾಗಿ, ದಸರಾ ಇಲ್ಲವೆ ಕ್ರಿಸ್‌ಮಸ್ ರಜೆಯೆಂದರೆ ಊರನ್ನೆಲ್ಲ ಸವಿಯೂಟಗಳ ಸುಗ್ಗಿಯಾಗುತಿತ್ತು.

ಆ ವರ್ಷ ದಶಂಬರ ರಜೆಯಲ್ಲಿ ಶಿವರಾಯರ ಮಗ ಶೀನು, ಮೇಲ್ಮನೆ ಶೇಷಪ್ಪನವರ ಮಗ ಆನಂದ್ರಾಯ, ಸಾಹುಕಾರ್ ಭುಜಂಗರಾಯರ ಅಳಿಯ ರಂಗ ಮೊದಲಾದವರೆಲ್ಲ ಊರಿಗೆ ದಯಮಾಡಿಸಿದ್ದರು. ಐದಾರು ದಿನಗಳಲ್ಲಿ ಅವರಿಗೆ ಹತ್ತೆಂಟು ಕಡೆಗಳಲ್ಲಿ ಪಾರ್ಟಿಗಳಾಗಿದ್ದುವು. ಮಿಶನ್ ಶಾಲೆಯ ಉಪಾಧ್ಯಾಯರೂ ತಮ್ಮ ಹಳೆಯ ವಿದ್ಯಾರ್ಥಿಗಳನ್ನು ಕರೆಯಿಸಿ ಒಂದು ಸತ್ಕಾರ ಕೂಟವೇರ್ಪಡಿಸಿದ್ದರು. ಶೇಷಪ್ಪನವರು ತಮ್ಮ ಮಗನ ಆಗಮನದ ಸಂತೋಷಾರ್ಥವಾಗಿ ಒಂದು ಸತ್ಯನಾರಾಯಣ ಮಾಡಿಸಿ, ಊರವರನ್ನೆಲ್ಲ ಆಮಂತ್ರಿಸಿದ್ದರು. ಹೀಗೆ ಅಲ್ಲಲ್ಲಿ ಔತಣಗಳನ್ನುಂಡ ಆನಂದ್ರಾಯ, ಶೀನು, ರಂಗ ಇವರಿಗೆ 'ವರ್ಷವೆಲ್ಲಾ ರಜೆಯಾಗಿದ್ದರೆ ಎಷ್ಟು "ಸುಖ" ಎಂದೆನಿಸುತಿತ್ತು. ಶೀನುಗಂತೂ ಪುನಃ ಊರು ಬಿಟ್ಟು ಹೋಗುವುದೆಂದರೆ ಗಂಡನ ಮನೆಗೆ ಹೋಗುವ ಹೆಣ್ಣಿನ ಅವಸ್ಥೆಯಾಗುತಿತ್ತು. ಮೂರನೆಯ ತಾರೀಕಿಗೆ ರೈಲು ಹತ್ತಬೇಕೆಂಬ ಚಿಂತೆಯ ಹುಳವು ಒಂದನೆಯ ತಾರೀಕಿನಿಂದಲೆ ಅವನ ಮನಸ್ಸನ್ನು ಆಗಾಗ ಕೊರೆಯುತಿತ್ತು.

ಶೀನಪ್ಪನ ಹೆಂಡತಿಯ ಎಣಿಕೆಯಂತೆ ಮಾಧವರಾಯರ ಮನೆಯ ಊಟವೆಂಬುದು ಇಂತಹ ಔತಣಗಳಲ್ಲೊಂದಾಗಿತ್ತು. ಆದರೆ ಊರಿನ ಶ್ರೀಮಂತರಲ್ಲಿ ನಾಲ್ಕಾರು ಕಡೆ ಮಿತ್ರಭೋಜನಗಳಾದಾಗ, ಶೀನಪ್ಪನಿಗೆ ಆಮಂತ್ರಣ ಸಿಕ್ಕಿರಲಿಲ್ಲ. 'ಮಾಧವರಾಯರಲ್ಲಿಯೂ ತನಗೆ ಇದೇ ಗತಿಯಾಯಿತಲ್ಲಾ!' ಎಂಬ ಯೋಚನೆಯು ಅವನ ತಲೆ ಎಷ್ಟು ಕರಡು ಮಾಡಿತೊ ದೇವರೆ ಬಲ್ಲ. ಅಂತೂ ಆ ಅಪರಾಹ್ನದ ಅರೆನಿದ್ದೆಯಲ್ಲಿ ಶೀನಪ್ಪನೊಂದು ಕನಸುಗಂಡ. ಆ ಕನಸಿನಲ್ಲೇ ಶ್ರೀಮಂತರ ದರ್ಪವನ್ನಿಳಿಸುವ ಒಂದು ಕುಹಕೋಪಾಯವು ಅವನಿಗೆ ಹೊಳೆಯಿತೆಂದು ತೋರುತ್ತೆ.

oo oo oo oo

ಸಾಯಂಕಾಲ ನಿದ್ದೆಯಿಂದ ಎಚ್ಚತ್ತೊಡನೆ, ಶೀನಪ್ಪನು 'ಮದ್ರಾಸಿನ ಹುಡುಗ'ರ ಮನೆಗಳಿಗೆ ಹೋದ. ಅವರ ಹೆತ್ತವರನ್ನು ಬಲವಂತ

ಪಡಿಸಿದ. ತನ್ನ ಮನೆಗೂ ಮಕ್ಕಳನ್ನು ಊಟಕ್ಕೆ ಕಳುಹಿಸಬೇಕೆಂದು ಹಟ ಹಿಡಿದ. ಭುಜಂಗರಾಯ ಮತ್ತು ಶೇಷಪ್ಪನವರು 'ಹುಡುಗರಿಗೆ ನಾಳೆ ಸಾಯಂಕಾಲವೇ ರೈಲುಹತ್ತಬೇಕು. ಬರುವ ರಜೆಯಲ್ಲಿ ನೋಡಿದರಾಗದೆ?' ಎಂದು ಎಷ್ಟೋ ಹೇಳಿದರು. ಆದರೆ ಶೀನಪ್ಪನು ಕೇಳಲಿಲ್ಲ. "ಹುಡುಗರೇನು ಮಾಡಲಿಕ್ಕಿದೆ? ಹನ್ನೆರಡು ಗಂಟೆಗೆ ಬಂದರೆ ಸರಿ. ಒಂದರೊಳಗೆ ಮರಳುವಂತೆ ಏರ್ಪಾಡು ಮಾಡಿದರೆ ಸಾಕಷ್ಟೆ!" ಎಂದು ವಾಗ್ದಾನ ಮಾಡಿದ. ಮರುದಿನ ತನ್ನಲ್ಲಿ ಭೋಜನಕ್ಕೆ ಮಕ್ಕಳ ಸಮೇತ ತಾವೂ ಬರುವೆವೆಂಬ ಮಾತು ಪಡೆದು ಅಲ್ಲಿಂದ ನೆಟ್ಟಗೆ ಶಿವರಾಯರಲ್ಲಿಗೆ ಹೋದ. ಅವರು ಮಾತ್ರ "ಶೀನು ಬಂದಾನು. ನನ್ನನ್ನು ಒತ್ತಾಯ ಪಡಿಸಬೇಡಿ. ಹೊಟ್ಟೆಗೆ ಸ್ವಲ್ಪ ಕಾಯಿಲೆಯಿದೆ" ಎಂದು ನೆವ ಹೇಳಿದರು. "ಪರವಾಯಿಲ್ಲ, ತಮಗೆ ಬರಲಿಷ್ಟಕ್ಕೂ ಅನಾನುಕೂಲವೆಂದಾದರೆ ಮಗನನ್ನಾದರೂ ಕಳುಹಿಸದಿರಬಾರದೆಂದೂ ಆನಂದ್ರಾಯ ರಂಗರೊಂದಿಗೆ ಶೀನುವೂ ಬರಲಿ"ಯೆಂದೂ ಹೇಳಿ ಶೀನಪ್ಪನು ಮನೆಗೆ ಬಂದ.

ಶೀನಪ್ಪನಿಗೆ ಇನ್ನುಳಿದ ಕೆಲಸವೆಂದರೆ ಊಟದ ಏರ್ಪಾಡು. ಎಳ್ಳಿನಿಂದ ತೊಡಗಿ ಅಕ್ಕಿಯವರೆಗೆ ಪ್ರತಿಯೊಂದು ಸಾಮಗ್ರಿ ಬೇಕು. ಊರಿನ ಇಷ್ಟಮಿತ್ರರಿಗೆಲ್ಲ ಆಮಂತ್ರಣ ಕೊಡಬೇಕು. ಅಡುಗೆಯವರನ್ನು ಹುಡುಕಿ ತೆಗೆಯಬೇಕು. ಇವೆಲ್ಲ ಕೆಲಸಗಳ ನಿಮಿತ್ತ ಶೀನಪ್ಪ ಮತ್ತು ಅವನ ಮಗ ಪೇಟೆಯೆಲ್ಲಾ ಅಡ್ಡಾಡತೊಡಗಿದರು. ಎಂಟು ಗಂಟೆಯೊಳಗೆ ಊರಿಗೆ ಊರೇ ಭೋಜನಕ್ಕೆ ಆಮಂತ್ರಿಸಲ್ಪಟ್ಟಿತು.

ಶೀನಪ್ಪನು ಮಾರ್ಕೆಟಿಗೆ ಹೋಗಿ ಲಿಂಜಿ ಮೆಣಸು, ತರಕಾರಿ, ಬಾಳೆ ಎಲೆ ಮೊದಲಾದ ಎಲ್ಲಾ ವಸ್ತುಗಳನ್ನು ತಂದು ಅಡುಗೆಯ ಶಿವಭಟ್ಟನನ್ನು ಹುಡುಕಿತಂದ. ಅವನನ್ನು ಸಾಹುಕಾರರಲ್ಲಿಗೆ ಕರೆದೊಯ್ದು ೧೫೦ ಜನರ ಭೋಜನದ ಸಾಮಗ್ರಿಗಳನ್ನು ಲೆಕ್ಕಕ್ಕೆ ಬರೆಯಿಸಿ ಪಡೆದುಕೊಂಡ. ಇಷ್ಟಾಗುವಾಗ ಗಂಟೆ ಹತ್ತು ಮೀರಿತ್ತು. ಇನ್ನು ಪಾತ್ರೆಗಳೊಂದೇ ಉಳಿದವುಗಳು. ನೆರೆಮನೆಗಳಿಗೆ ಹೋಗಿ ಗೊರಕೆ ಹೊಡೆಯುವ ಹೆಂಗಸರನ್ನು ಎಚ್ಚರಿಸಿ, ಕವಳಿಗೆ, ಸೌಟುಗಳು, ಗೋಮುಖ

ಮೊದಲಾದ ಮರದಿನಕ್ಕೆ ಬೇಕಾದ ಪಾತ್ರಗಳನ್ನು ಎರವಾಗಿ ತಂದ. ಹೇಗೂ ನಡುರಾತ್ರಿಯ ಮುಂಚೆಯೇ ಭೋಜನದ ಸಕಲಸನ್ನಾಹಗಳೂ ಮುಗಿದುವೆಂದಾಯಿತು.

ಮರುದಿನ ಮುಂಜಾನೆಯಿಂದಲೇ ಶೀನಪ್ಪನ ಮನೆಯ ಮೇಲೆ ಮುಸುಕಿದ ಹೊಗೆಯು ಮಿತ್ರ ಭೋಜನದ ವಾರ್ತೆಯನ್ನು ದಶದಿಕ್ಕುಗಳಿಗೂ ಹರಡುತಿತ್ತು. ಈ ಹೊಗೆಯೇ ಮಳೆಗಾಲದ ಕಾರ್ಮೋಡಗಳಂತಹ ದಟ್ಟ ಮೋಡಗಳನ್ನುಂಮಾಡಿತು.

ಮಧ್ಯಾಹ್ನ ಹನ್ನೆರಡಾಗುತ್ತಾ ಅಭ್ಯಾಗತರು ಒಬ್ಬೊಬ್ಬರಾಗಿಯೆ ಶೀನಪ್ಪನಲ್ಲಿಗೆ ಬರತೊಡಗಿದರು. ಶೀನಪ್ಪನ ಮಗನು ಹೊಸ್ತಿಲಲ್ಲಿ ನಿಂತು ಬಂದವರನ್ನೆಲ್ಲ ಚಾವಡಿಯಲ್ಲಿ ಹಾಸಿದ ಚಾಪೆಯಲ್ಲಿ ಕೂತುಕೊಳ್ಳಿಸುತಿದ್ದ. ಶೀಪಪ್ಪ, ಭುಜಂಗರಾಯ, ಮಾಧವರಾಯ-ಅವರಿವರೆಂದಿಲ್ಲ ಮುಕ್ಕಾಲು ಮೂರು ವೀಸ ಜನರು ಬಂದುದಾಯಿತು. ಸರಿ! ಶೀನಪ್ಪನ ಮನೆಯೆಂಬುಂದು ತರತರದ ಬಣ್ಣದ ಮಡಿಬಟ್ಟೆಗಳಿಂದ ಕಾಮನ ಬಿಲ್ಲಿನಂತೆ ಶೋಭಿಸಿತು. ಬಂಗಾರದಂತೆ ಮಿರುಗುವ ಕಂಚು ಹಿತ್ತಾಳಿಯ ತಂಬಿಗೆಗಳಿಂದ ಚಾವಡಿಯು ರಂಜಿಸಿತು.

ಇಷ್ಟಾದರೂ ಒಂದು ಮಹಾ ಕೌತುಕ- ಶೀನಪ್ಪನು ಕಾಣೆ.

ಅಭ್ಯಾಗತರು ಇದನ್ನು ಕಂಡಿದ್ದರೂ ತಮ್ಮ ತಮ್ಮೊಳಗೆ ಒಬ್ಬೊಬ್ಬರು ಒಂದೊಂದು ಅಭಿಪ್ರಾಯ ಮಾಡಿಕೊಂಡಿದ್ದರು. 'ಅಡುಗೆ ಕೋಣೆಯಲ್ಲಿರಬಹುದೆಂದು' ಕೆಲವರು. 'ಮರೆತವರನ್ನು ಕರೆಯ ಹೋಗಿರಬಹುದೆಂದು' ಕೆಲವರು ಹೀಗೆ ಪ್ರತಿಯೊಬ್ಬನು ಮನಸ್ಸಿನಲ್ಲಿ ಏನೋ ಕಾರಣಕಲ್ಪಿಸಿಕೊಂಡು ಊರಿನ ಸಮಾಚಾರಗಳನ್ನೆಲ್ಲ ಮೆಲ್ಲುತ್ತ, ತನ್ನ ಹೊಟ್ಟೆ, ನಾಲಗೆಗಳನ್ನು ಭೋಜನಕ್ಕೆ ಅನುಗೊಳಿಸತೊಡಗಿದ.

ಆಮಂತ್ರಿತರಲ್ಲಿ ರಾಮರಾಯನೂ ಒಬ್ಬನಾಗಿದ್ದ. ಊಟಕ್ಕೆ ಕರೆದಲ್ಲೆಲ್ಲಾ ಏನಾದರೂ ಪಾರುಪತ್ಯ ನಡೆಸದೆ, ಊಟ ಮಾಡಿ ಹಿಂದೆ ಹೋಗುವುದೆಂದರೆ ಅವನಿಗೆ ಒಗ್ಗದ ವಿಷಯ. ಎಲೆ ಹಾಕುವುದು, ಉಪ್ಪು, ಉಪ್ಪಿನಕಾಯಿ ಬಡಿಸುವುದೇ ಮೊದಲಾದ ಚಿಕ್ಕಪುಟ್ಟ ಕೆಲಸಗ

ಳೆಂದರೆ ಅವನಿಗೆ ಪ್ರೀತಿ ಅಷ್ಟಿಷ್ಟಲ್ಲ. ಶೀನಪ್ಪನಲ್ಲಿಯೂ ಊಟಕ್ಕೆ ಬಂದೊಡನೆ, ಮಡಿಯಲ್ಲೇ ಅವನು ಸೀದಾ ಅಡುಗೆ ಕೋಣೆಗೆ ಹೋದ. ಶೀನಪ್ಪನು ಅಲ್ಲಿರಬಹುದೆಂದು ಅವನೆಣಿಸಿದ್ದ. ಆದರೆ ಅಲ್ಲಿಯೂ ಶೀನಪ್ಪನ ಸುಳಿವೇ ಇಲ್ಲ. ರಾಮುರಾಯನು ಅತ್ತಿತ್ತ ಇಣಿಕಿ ನೋಡಿದ. ಅಡುಗೆಯವರೂ ಕಾಣಲಿಕ್ಕಿಲ್ಲ. ಒಲೆಗಳ ಮೇಲೆ ಕವಳಿಗೆಗಳೇನೊ ನಿಂತಿವೆ. ಒಲೆಗಳಲ್ಲಿ ಬೆಂಕಿಯೇನೊ ಧಗಧಗ ಉರಿಯುತ್ತಿದೆ. ರಾಮುರಾಯನ ಕುತೂಹಲವು ಇಮ್ಮಡಿಯಾಯಿತು. ನೆಟ್ಟಗೆ ಒಳ ಹೊಕ್ಕು ನೋಡಿದ. ಶಿವ ಭಟ್ಟನು ಒಂದು ಮೂಲೆಯಲ್ಲಿ ಚಾಪೆಹಾಕಿ ಕುಂಭಕರ್ಣನ ಅವತಾರ ತಾಳಿದ್ದಾನೆ. ದೊಡ್ಡದೊಡ್ಡ ಕವಳಿಗೆಗಳನ್ನು ಏರಿಸಿದುದೇ ವಿನಾ ಮತ್ತಾವ ಸಿದ್ಧತೆಗಳೂ ತೋರಿಬರುವುದಿಲ್ಲ. ಈ ವಿಚಿತ್ರವನ್ನೆಲ್ಲ ಕಂಡು ರಾಮುರಾಯನು ಅವಾಕ್ಕಾದ. ಸಮೀಪಕ್ಕೆ ಬಂದು, ಕವಳಿಗೆಯೊಂದರಲ್ಲಿ ಇಣಿಕಿ ನೋಡಿದ—ನೋಡುವುದೇನು? ಸಳಮಳನೆ ಕುದಿಯುವ ನೀರು. ಪ್ರತಿಯೊಂದರಲ್ಲಿಯೂ ಇರುವುದೆಂದರೆ ೧೦೦°Cನ ನೀರು! ಶೀನಪ್ಪನು ಮಿತ್ರ ಭೋಜನವೆಂದು ಏನೋ ತಂತ್ರ ಹೂಡಿರಬೇಕೆಂದು ರಾಮುರಾಯನಿಗೆ ಖಂಡಿತವಾಯಿತು.

ಅವನು ಇಳಿಮೋರೆಮಾಡಿ ಹೊರಬಂದ- ಮನಸ್ಸಿನಲ್ಲಿ ಬೂದಿಯೊಳಗಿನ ಕೆಂಡದಂತೆ, ಸಿಟ್ಟು ಉರಿಯುತಿತ್ತು. ಅಷ್ಟರಲ್ಲಿ ಪಕ್ಕದ ಕೋಣೆಯಲ್ಲಿ ಶೀನಪ್ಪನ ಹೆಂಡತಿಯೂ ಮಲಗಿಕೊಂಡಿರುವುದು ಕಂಡುಬಂತು. 'ಏನಿದು, ಈ ಮನೆಯುವರಿಗೆಲ್ಲಾ ನಿದ್ರಾರೋಗ ಹಿಡಿದಿದೆಯೇನು!' ಎಂದು ಇನ್ನಷ್ಟು ಕಿಡಿಕಿಡಿಯಾದ ರಾಮುರಾಯ. ಮರುಕ್ಷಣದಲ್ಲಿಯೆ ಶೀನಪ್ಪನ ಹೆಂಡತಿಯ ಸ್ವರಕೇಳಿಸಿತು.

'ಯಾರದು?'

'ನಾನು'

'ನಾನೆಂದರೆ........?'

'............ಶೀನಪ್ಪನವರಿಲ್ಲವೆ?'

'ಇಲ್ಲ.'

‘ಎಲ್ಲಿಗೆ ಹೋಗಿದ್ದಾರೆ?’

‘ಪೇಟೆಗೆ’

‘ಯಾಕೆ?’

‘ಒಂದು ಸೀರೆ ಬೇಕೆಂದಿದ್ದೆ. ಅದನ್ನು ತರಲು ಹೋಗಿದ್ದಾರೆ’.

‘ಹಾಗಾದರೆ ನಮ್ಮನ್ನು ಊಟಕ್ಕೆ ಕರೆದುದೇಕೆ?’

‘ನನಗೇನು ಗೊತ್ತು? ಕರೆದವರು ಯಾರು?’

ರಾಮರಾಯನ ಕೈಯಲ್ಲಿ ದೊಣ್ಣೆಯೊಂದಿದ್ದರೆ ಅವನು ಏನುಮಾಡುತಿದ್ದನೊ ಹೇಳಬರುವಂತಿರಲಿಲ್ಲ. ಅವನು ಬಂದ ಸಿಟ್ಟನ್ನು ಮನಸ್ಸಿನಲ್ಲಿಯೇ ನುಂಗಿ, ತುಟಿಪಿಟಕ್ಕೆನ್ನದೆ ಚಾವಡಿಗೆ ಬಂದ. ನೆರೆದವರ ಚಕ್ಕಂದವಿನ್ನೂ ಮುಗಿದಿರಲಿಲ್ಲ. ಅವನು ತನ್ನ ಒಬ್ಬಿಬ್ಬರು ಗೆಳೆಯರನ್ನು ಕರೆದು ಅವರೊಡನೆ ತನ್ನ ಅನುಭವವನ್ನೆಲ್ಲ ಹೇಳಿದ. ಮತ್ತೇನು- ನೆರೆದವರಲ್ಲಿ ಗುಜುಗುಜು ಮಾತಿಗಾರಂಭವಾಯಿತು. ‘ನನಗೆ ಮೊದಲೇ ಅನುಮಾನವಾಗಿತ್ತು ಎಂದು ಕೆಲವರೆಂದರು. ಆದರೂ ಗಟ್ಟಿಯಾಗಿ ಮಾತನಾಡಲು ಯಾರಿಗೂ ನಾಚುಗೆ ಬಿಡಲಿಲ್ಲ. ಎಲ್ಲರೂ ಶೀನಪ್ಪನನ್ನು ಶಪಿಸುತ್ತ, ಸಾವಧಾನವಾಗಿ ಮನೆಯ ಹೊರಬಿದ್ದರು.

ಸ್ವಲ್ಪ ಸಮಯದಲ್ಲೇ ಸುಡುಗಾಡಿನಿಂದ ಮರಳುವ ಮೃತನ ಸಂಬಂಧಿಕರಂತೆ ಕಳೆಗುಂದಿದ ಮೊಗದಳೆದು ಅವರು ತಮ್ಮ ತಮ್ಮ ಮನೆ ದಾರಿ ಹಿಡಿದರು. ಮನೆಯಲ್ಲಿ ಪುನಃ ಊಟ ಮಾಡಿಸುವುದು ಅನಾನುಕೂಲವೆಂದಿದ್ದವರು ಹೋಟೇಲುಗಳಿಗೆ ಶರಣಾದರು. ಮೌನವಾಗಿ ಮರಳುವ ಶ್ರೀಮಂತರನ್ನೆಲ್ಲ ಕಂಡು, ಅಟ್ಟದ ಮೇಲೆ ಕುಳಿತ ಶೀನಪ್ಪನು ತನ ಮನಸ್ಸಿನಲ್ಲಿ ಒಳಗೊಳಗೇ ನಗುತಿದ್ದ.

ಕ್ರಮೇಣ ಅಂದಿನ ಅತಿಥಿಗಳಿಗೆಲ್ಲಾ ಶೀನಪ್ಪನ ಮಿತ್ರಭೋಜನದ ಕಾರಣವು ತಿಳಿಯಿತು. ಅಂದಿನಿಂದ ಊರಲ್ಲಿ ಏನೇ ಊಟವಿರಲಿ, ಮೊದಲು ಆಮಂತ್ರಣ ಸಿಗುತಿದ್ದುದೆಂದರೆ ಅದು ಶೀನಪ್ಪನಿಗಾಗಿತ್ತು.

೨

# ನಾಯೋತಿ

ಬೊಂಬಾಯಿಯ ಸುಪ್ರಸಿದ್ಧ 'ಎಂಪಾಯರ್ ಬೇಂಕಿ'ನಲ್ಲಿ ನಾನು ಆಗ ಹೆಡ್ ಎಕೌಂಟಂಟನಾಗಿದ್ದೆ. ಅರ್ಧವರ್ಷದ "ಎಕೌಂಟ್ಸ್" ಮುಗಿಸಲು ಕೆಲವೇ ದಿವಸಗಳಿದ್ದುವು. ಹಿಂದಿನ ಒಂದು ವಾರದಿಂದಲಂತೂ ದಿನವಿಡಿ ತಲೆಕೆರೆದು ಸಾಕಾಗುತಿತ್ತು. ಆಫೀಸು ಮುಗಿಸಿ ಮನೆಗೆ ಮರಳುವಾಗ ಘಂಟೆ ಎಂಟು-ಒಂಭತ್ತಾಗುತಿತ್ತು. "ಯಾವ ಸುಡುಗಾಡಿನ ಎಕೌಂಟೊ ನಾನರಿಯೆ. ವಾಯುಸಂಚಾರಕ್ಕೂ ಸಮಯವಿಲ್ಲವಂತೆ". ಎಂದು ಮನೆಯಾಕೆ ಗೊಣಗುತಿದ್ದಳು. ಮನೆಯವರಿಗೇನು ಗೊತ್ತು, ಗಂಡಸರ ಉದ್ಯೋಗದ ಸಂಕಷ್ಟ?

ಸಂಜೆಯ ಟಪ್ಪಾಲಿಗೇನೇ ಹೊರಡಬೇಕಾದ ಕೆಲವು 'ಪೇಪರು'ಗಳನ್ನು ತಯಾರಿಸುವ ಕೆಲಸದಲ್ಲಿ ನಾನು ನಿರತನಾಗಿದ್ದೆ. ಕರೀಮನು ಆಫೀಸಿನ ಹೊರಕೋಣೆಯಲ್ಲಿ ಸಜ್ಜಾದ ಲಕೋಟೆಗಳಿಗೆ ಚೀಟು ಅಂಟಿಸುತ್ತಿದ್ದ. ಅವನಿಗೆ ಎಲ್ಲಿಂದ ಆಕಾಶವಾಣಿಯಾಗುತಿತ್ತೋ ದೇವರೇ ಬಲ್ಲ. "ಕರೆದಿರೇನು ಸಾರ್!" ಎಂದು ಎರಡುಬಾರಿ ಒಳಗೆ ಬಂದುದಾಯಿತು. ಯಾರೂ ಕರೆಯಲಿಲ್ಲವೆಂದು ತಿಳಿದೊಡನೆ ನಾಚಿ, ತಲೆತಗ್ಗಿಸಿ ಹೊರಟು ಹೋಗಿದ್ದ. ಪಾಪ! ಕಿವಿ ಸ್ವಲ್ಪ ಕಿವುಡು. ಆದರೆ ಯಜಮಾನರಿಗೆಲ್ಲಾದರೂ ರೇಗೀತೆಂದು ಅಂಜಿಕೆ.

ಮೂರನೆಯ ಸಲವೂ ಆಫೀಸಿನ ದೂಡು ಬಾಗಿಲು ತೆರೆಯಿತು. ಕರೀಮನ ಕಾಟ ವಿಪರೀತವಾಯಿತೆಂದು ನಾನು ಸಿಟ್ಟಿಗೆದ್ದೆ. ಆದರೆ ಈ ಬಾರಿ ಅವನು ಬಂದುದು ನನ್ನ ಕರೆಯನ್ನು ಲಾಲಿಸಿಯಲ್ಲ. ಕೈಯಲ್ಲಿ 'ವ್ಹಿಜಿಟಂಗ್ ಕಾರ್ಡ್' ಹಿಡಿದುಕೊಂಡು ಒಳಗೆ ಬಂದಿದ್ದ. "ಸರ್!

ಯಾರೋ ಒಬ್ಬ ದೊಡ್ಡ ಮನುಷ್ಯರು ಹೊರಗೆ ಕಾಯುತ್ತಿದ್ದಾ
ಎಂದು ಕಾರ್ಡನ್ನು ಮೇಜಿನ ಮೇಲಿಟ್ಟು ಮರುತ್ತರವನ್ನು ನಿರೀಕ್ಷಿಸು
ನಿಂತ. ಕಾರ್ಡು ತೆಗೆದು ಓದಿದೆ. 'ಮಿ. ಜಹಗೀರದಾರ್. ಬಿ.
ಎಂದಿತ್ತು. ವ್ಯಕ್ತಿಗಳೇನೊ ನನಗೆ ತೀರಾ ಅಪರಿಚಿತರು. ಬೇಂ
ಕೆಲಸದ ಮೇಲೆ ಬಂದಿದ್ದಾರೆ ಎನ್ನೋಣವೇ" ಆಫೀಸು ಮುಗಿ
ಒಳಗೆ ಬಿಡದೆ ಉಪಾಯವಿದೆಯೇ "ಬರ ಹೇಳು" ಎಂದೆ.

ಕರೀಮನ 'ದೊಡ್ಡ ಮನುಷ್ಯ'ರು ಕೋಣೆಯೊಳಗೆ ಪ್ರವೇಶಿಸಿದರು. ವ್ಯಕ್ತಿಯಾದರೋ ದೊಡ್ಡದೆ; ತಲೆಯಲ್ಲಿ ಹಸುರು ಮುಂಡಾಸು. ಕಣ್ಣುಗಳಲ್ಲಿ "ಅಪ್-ಟು-ಡೇಟ್" ಮಾದರಿಯ ಉಪನಯನಗಳು, ಮೊಣ ಕಾಲಿಗೆ ಇಳಿದಿರುವ ಉದ್ದ ಕೋಟು, ಪಾಯಿಜಾಮೆ, ಕಾಡಿಗೆಯಂತೆ ಹೊಳೆಯುವ ಕಪ್ಪುಬಣ್ಣದ ನೂತನ ವಾಕಿಂಗ್ ಸ್ಟಿಕ್, ಇವುಗಳಿಂದ ಅಲಂಕೃತರಾದ ಜಹಗೀರದಾರರು ಒಳಬರುತ್ತಲೇ ನನ್ನನ್ನು ಅಭಿವಂದಿಸಿದರು. ನಾನು ಮರಳಿ ಅಭಿವಂದಿಸಿ ಕುಳಿತುಕೊಳ್ಳಲು ಅವರಿಗೆ ಆಸನವನ್ನು ತೋರಿಸಿದೆ. ಇಂತಹ ಸಂದರ್ಭಗಳಲ್ಲಿ ವಾಡಿಕೆಯಲ್ಲಾಗುವಂತೆ ಒಂದೆರಡು ನಿಮಿಷಗಳ ವರೆಗೆ ಇಬ್ಬರೂ ಮಾತನಾಡಲಿಲ್ಲ. ಕಡೆಗೆ "ತಮಗೆಲ್ಲಾಯಿತು?" ಎಂದು ನಾನೇ ಬಾಯಿ ತೆರೆದೆ.

"ಬೊಂಬಾಯಿಯಲ್ಲಿಯೆ.......

"ಏನು ಬರೋಣಾಯಿತು?"

"........ತಮಗೆ ನಾನು ಹೆಚ್ಚಾಗಿ ಹೇಳಬೇಕೆಂದಿಲ್ಲ. ಈ ಪೇಟೆಯ ಬಾಳಿಗೆ ಮರುಳಾಗಿ ಅದೆಷ್ಟೋ ಶಿಕ್ಷಿತ-ಅಶಿಕ್ಷಿತ ಯುವಕರು ಚಾಕರಿಗಾಗಿ ಬರುವರಷ್ಟೇ?........'

ಜಹಗೀರದಾರರ ಇಂಗಿತವನ್ನು ಕೊಂಚ ಅರಿತೆ.

"ಸರಿ ಸ್ವಾಮಿ. ನಾವೇನು ಮಾಡಬಲ್ಲೆವು? ಅಶಿಕ್ಷಿತರಿಗಂತೂ ನಮ್ಮ ಸಂಸ್ಥೆಗಳಲ್ಲಿ ಆಸರೆಯೇ ಇಲ್ಲ. ಶಿಕ್ಷಿತರಲ್ಲಿಯೂ ಈಗ ಇದ್ದವರೇ ಹೆಚ್ಚಾಗಿದ್ದಾರೆ. ಹೀಗಿರುವಾಗ... ..."

"ಪರಿಸ್ಥಿತಿಯನ್ನೆಲ್ಲ ಪರ್ಯಾಲೋಚಿಸಿ ಪುರಪ್ರಮುಖರಲ್ಲಿ ಕೆಲ ರರು ಸೇರಿ ಒಂದು ಸಮಿತಿಯನ್ನು ಸ್ಥಾಪಿಸಿರುವೆವು".

"ನಿಮ್ಮ ಕಾರ್ಯಕ್ರಮವೇನು?"

"ಉದ್ಯೋಗವಿಲ್ಲದವರಿಗೆ ಉದ್ಯೋಗವನ್ನು ದೊರಕಿಸಿಕೊಡುವುದು. ದಕ್ಕೆ ತಮ್ಮಂತಹರ ಸಹಕಾರ ಸಹಾನುಭೂತಿಗಳು ಬೇಕು. ಅದಕ್ಕಾಗಿಯೇ ಸಮಿತಿಯ ಕಾರ್ಯದರ್ಶಿಯಾದ ನಾನು ಇಲ್ಲಿಗೆ ಬರಬೇಕಾಯಿತು. ಕ್ಷಮಿಸಿರಿ, ತಮ್ಮ ಕೆಲಸಕ್ಕೆ ಆತಂಕವಾಯಿತೋ ಏನೋ?"

"ನನ್ನಿಂದೇನು ಸಹಾಯವನ್ನು ನಿರೀಕ್ಷಿಸುತ್ತೀರಿ?"

"ತಮ್ಮ ಸಂಸ್ಥೆಯಲ್ಲಿ ಉದ್ಯೋಗವೇನಾದರೂ ಖಾಲಿ ಬೀಳುವ ಸಂದರ್ಭದಲ್ಲಿ ನಮಗೆ ತಿಳಿಸಿದರೆ ಅದೇ ಒಂದು ಉಪಕಾರ".

"ಅಷ್ಟೇ ತಾನೆ! ನನ್ನ ಆಕ್ಷೇಪವೇನೂ ಇಲ್ಲ. ಮೆನೇಜರ ಸಾಹೇಬರೊಡನೆಯೂ ತಾವು ಮಾತನಾಡುವುದು ಲೇಸು".

"ಉಪಕಾರವಾಯಿತು ಬರುತ್ತೇನೆ" ಎಂದು ಹೇಳುತ್ತ ಜಹಗೀರದಾರರು ಹೊರಟುಹೋದರು.

ಉಳಿದ ಅಲ್ಪಸ್ವಲ್ಪ ಕೆಲಸವನ್ನು ಮುಗಿಸಿ ನಾನು ಮನೆಗೆ ಮರಳುವಾಗ ಗಂಟೆ ಏಳಾಗಿತ್ತು.

ಮನೆಯಲ್ಲಿ ಟೀ ತಯಾರಾಗಿತ್ತು. ಕಾಲು ತೊಳೆದು ಬಟ್ಟೆ ಬದಲಾಯಿಸಿ, "ಟಿಫಿನ್" ತೀರಿಸಿ, ಹೊರಕೊಠಡಿಯ ಆರಾಮಕುರ್ಚಿಯಲ್ಲೊರಗಿ ಸಿಗರೇಟು ಸೇದುತ್ತ ವಿಶ್ರಮಿಸುತಿದ್ದೆ. ನಗರದ ಜನನಿಬಿಡವಾದ ಬೀದಿಗಳಿಂದ ತುಸುದೂರದಲ್ಲಿ ನಮ್ಮ ಮನೆಯಿದ್ದ ಕಾರಣ ಸಂಜೆ ಮಂದವಾದ ಗಾಳಿಯು ತೀಡುತಿತ್ತು. ಸುತ್ತಮುತ್ತಲಿನ ಸೌಧಗಳ ಸೊಬಗಿನ ನೋಟ, ಹೂದೋಟಗಳಿಂದ ಎಲ್ಲೆಡೆಗೂ ಹಬ್ಬಿದ ಹೂಗಳ ಕಂಪು, ಮನಸ್ಸಿಗೆ ಆಹ್ಲಾದವನ್ನುಂಟುಮಾಡುತಿದ್ದುವು. ಅವನ್ನು ಸವಿಯುತ್ತಲೇ ಹಾಯಾಗಿ ಒರಗಿದ್ದೆ.

ಅಷ್ಟರಲ್ಲಿ ಬಾಗಿಲ ಬಳಿಯಲ್ಲಿ ಯಾರೋ ನಿಂತಿರುವಂತೆ ಭಾಸ

ವಾಯಿತು. ನಿಜ! ಒಬ್ಬ ಯುವಕ. ಒಳಗೆ ಪ್ರವೇಶಿಸಲೋ ಬೇಡವೋ ಎಂದು ಅವನ ಮನಸ್ಸು ಉಯ್ಯಾಲೆಯಾಡುತಿತ್ತೆಂದು ತೋರುತ್ತಿತ್ತು.

''ಯಾರದು?' ಮರಾಠಿಯಲ್ಲಿ ನಾನು ಪ್ರಶ್ನಿಸಿದೆ.

''ನಾ....ನು" ಕನ್ನಡದಲ್ಲಿ ಉತ್ತರ.

ನನಗೆ ಆಶ್ಚರ್ಯವಾಯಿತು. ಪ್ರಾಯಶಃ ನಮ್ಮ ಊರವನಾಗಿರಬೇಕು. ಬಿಡುವಿದೆ. ಮಾತನಾಡಿಸೋಣವೆನಿಸಿತು.

''ಒಳಗೆ ಬರಬಹುದಲ್ಲವೆ?" ಎಂದೆ.

ಯುವಕನು ಅಳುಕುತ್ತ ಮೆಲ್ಲನೆ ಒಳಗೆ ಪ್ರವೇಶಿಸಿದನು. ಅವನ ಪ್ರಾಯ ಸುಮಾರು ಹದಿನೆಂಟಿದ್ದಿರಬಹುದು. ತಲೆಯಲ್ಲಿ ಕ್ರಾಪಿತ್ತು. ಬಾಚಿರಲಿಲ್ಲ. ಇಂದಿನ ಶಿಕ್ಷಿತ ಯುವಕರೆಲ್ಲರಂತೆ ಹಿಂಗಾಲು ವರೆಗೆ ಇಳಿದು ನೆಲದ ಮೇಲೆ ಹರಿಯುತ್ತ ಹೋಗುವ ಸಡಿಲಾದ ಪಾಯಿಜಾಮೆ ತೊಟ್ಟಿದ್ದ. ಲಕ್ಷಣವಾಗಿದ್ದ. ಆದರೆ ಮುಖದಲ್ಲಿ ಸಂಕಷ್ಟಾನುಭವದ ಛಾಯೆ ಒಡಮೂಡಿತ್ತು. ಮಾತನಾಡಿಸುವ ಲವಲವಿಕೆಯು ಇನ್ನಷ್ಟು ಬಲಿಯಿತು. ಕುರ್ಚಿ ತೋರಿಸಿ ಕುಳಿತುಕೊಳ್ಳಲು ಹೇಳಿದೆ. ಅವನು ಕುಳಿತ.

"ಊರೆಲ್ಲಾಯಿತು ನಿನಗೆ?"

"ಮಂಗಳೂರಿನ ಸಮೀಪ. ಪಣಂಬೂರಿನಲ್ಲಿ".

"ಇಲ್ಲಿ ನಿನ್ನವರು ಯಾರಿದ್ದಾರೆ?"

"ನನ್ನವರೆಂದರೆ ನಾನೇ ಸರ್. ಕಡೆಗೆ ತಮ್ಮಂತಹ ಕರುಣಾಳುಗಳೇ ನನ್ನವರೆನಿಸುವರು".

"ಉಳಕೊಳ್ಳುವುದೆಲ್ಲಿ?''

"ಎಲ್ಲೆಂದೇನು? ತತ್ಕಾಲಕ್ಕೆ ಒಂದು ಹೋಟಲಲ್ಲಿಯೇ ನನ್ನ ವಸತಿ. ಕೈಯ್ಯ ಕಾಸು ಬರಿದಾದ ಮೇಲೆ ದೇವರೇ ಗತಿ".

"ಹಾಗಾದರೆ ನಿರುದ್ಯೋಗಿಯೇ ನೀನು?".

"ಹೌದು".

ಯುವಕನ ಪ್ರತಿಯೊಂದು ಮಾತಿನಲ್ಲಿಯೂ ನಿರಾಶೆಯ ಕಳೆಯಿತ್ತು. ಆದರೆ "ಬಂದದ್ದು ಬರಲಿ, ಅನುಭವಿಸಲು ಸಿದ್ಧನಿರುವೆನು" ಎಂಬ ಧೈರ್ಯವು ಅದರೊಡನೆ ಪ್ರತಿಸ್ಪರ್ಧಿಸುತಿತ್ತು.

"ಹತ್ತಿರದ ಸಂಬಂಧಿಕರಾರೂ ಇಲ್ಲದೆ, ಯಾರನ್ನು ನಂಬಿ ಈ ಶಹರಿಗೆ ಬಂದೆ?"

"ಆ ಪುರಾಣ ಬಿಚ್ಚಿದರೆ ತಮಗೆ ಬೇಸರಿಕೆಯಾಗುತ್ತದೇನೊ ಸರ್"

"ಇಲ್ಲ. ನನಗೆ ಕೇಳಬೇಕೆಂಬ ಆಸೆಯಿದೆ"

"ಹಾಗಾದರೆ ನಾನು ಬೊಂಬಾಯಿಗೆ ಬಂದುದು ನಮ್ಮೂರವರೊಬ್ಬರ ಮಾತಿಗೆ ಮರುಳಾಗಿಯೇ. ಅವರು ಅಲ್ಲಿಯ 'ಗಣೇಶ ಟಾಕೀಸ್, ನಲ್ಲಿ ಸಹಾಯಕ ಮೆನೇಜರರು. ನಮ್ಮ ಪರಿಚಯಸ್ಥರು. ನಮ್ಮ ಮನೆಗೆ ಆಗಾಗ ಬರುತಿದ್ದರು......"

"ಏಕೆ?"

ಯುವಕನು ನಸುನಾಚಿದ.

"ಏಕೆನ್ನಲಿ' ತುಂಬಿಯು ಹೂವಿಗೆರಗುವುದೇಕೆ?......ಒಂದು ದಿನ ಅಕ್ಕ ನನ್ನೊಡನೆ ಬೊಂಬಾಯಿಯ ಪ್ರಸ್ತಾಪವೆತ್ತಿದಳು. ಅವರೊಡನೆ ಹೋದರೆ ಬೊಂಬಾಯಿಯಲ್ಲಿ ನಿನಗೇನಾದರೂ ಕೆಲಸಕೊಡಿಸುತ್ತಾರಂತೆ. ಎಸ್. ಎಸ್. ಎಲ್. ಸಿ. ಮಾಡಿ ಮನೆಯಲ್ಲೇ ಇದ್ದೇನು ಲಾಭ" ಎಂದಳು. ರೋಗಿಯು ಬಯಸಿದಂತೆ ಹಾಲೇ ಸಿಕ್ಕಿತು. ಬೊಂಬಾಯಿ ನೋಡಬೇಕೆಂಬ ಬಾಲ್ಯದ ಆಸೆಯು ಹೂ ಬಿಟ್ಟಿತೆಂದೇ ಎಣಿಸಿದೆ. ಆದರೆ ಅಮ್ಮನಿಗೆ ಒಂದಿಷ್ಟೂ ಮನಸ್ಸಿರಲಿಲ್ಲ. ನಾನು ಮಾತ್ರ ಬೊಂಬಾಯಿಗೆ ಹೋಗುವ ಹಟ ಬಿಡಲಿಲ್ಲ. ಅವರೂ ಬರೇ ಮಾತುಕೊಟ್ಟ ಒಂದು ಅಪರಾಧಕ್ಕಾಗಿ ನನ್ನನ್ನು ಇಲ್ಲಿಗೆ ಕರೆದೊಯ್ದರೆಂದು ತೋರುತ್ತದೆ."

"ಕೆಲಸ ಕೊಟ್ಟರೇ?"

"ಕೊಟ್ಟರು, ನಿಜ. ಆದರೆ ಅವರು ಹೀಗೆ ಕೊರಳು ಕೊಯ್ಯ

ಬಾರದಿತ್ತು. ಎರಡು ತಿಂಗಳು ಅವರ ಥಿಯೇಟರಿನಲ್ಲಿ ಟಿಕೇಟ್ ಮಾಸ್ಟರ್‌ನಾಗಿದ್ದೆ. ದುರದೃಷ್ಟವಶಾತ್, ಊರಿನ ಮತ್ತು ಅಕ್ಕನ ನೆನಪು ಮಾಸಿಹೋದಂತೆ ಅವರಿಗೆ ನನ್ನ ಮೇಲಿನ ಪ್ರೀತಿಯೂ ಕುಂದತೊಡಗಿತು. ಅಕ್ಕನಂತೆಯೇ ಬೇರಾರನ್ನೊ ಒಲಿಸಿಕೊಳ್ಳಬೇಕಾಗಿತ್ತು. ಅವರಿಗೆ ಒಂದು ದಿನ ನನ್ನನ್ನು ಹೊರದಬ್ಬಿ ನನ್ನ ಕೆಲಸಕ್ಕೆ ಬೇರಾರನ್ನೋ ನೇಮಿಸಿದರು. ಈಗ ನಾನು "ಅಂಬಾವಿಲಾಸ"ವೆಂಬ ಹೊಟೆಲಿನಲ್ಲಿ ವಸತಿ ಮಾಡಿಕೊಂಡಿದ್ದೇನೆ. ಚಾಕರಿ ಶಿಕಾರಿಯೇ ನನ್ನ ಉದ್ಯೋಗ"

ಯುವಕನ ಪ್ರಾಮಾಣಿಕತೆಗೆ ನಾನು ಮನಸೋತೆ.

"ನಾನು ಮಂಗಳೂರಿನವನೆಂದು ನಿನಗೆ ಹೇಗೆ ತಿಳಿಯಿತು?"

"ಮೊನ್ನೆ ತಿರುಗಾಡುತ್ತಾ ಚೌಪಾಟಿಗೆ ಹೋಗಿದ್ದೆ. ಸಂಜೆಯ ಸಮುದ್ರ ತೀರದ ಸೊಬಗನ್ನು ಸವಿಯುತ್ತ ಕುಳಿತಿದ್ದೆ. ಕಳೆದ ದಿನಗಳ ವಿದ್ಯಮಾನಗಳು ಒಂದರಮೇಲೊಂದಾಗಿ ಬಂದು ಅಂತರಂಗವನ್ನು ಆಕ್ರಮಿಸತೊಡಗಿದುವು. ಅವನ್ನೇ ಮನಸ್ಸಿನಲ್ಲಿ ಮೆಲುಕು ಹಾಕುತ್ತ ಕುಳಿತಿದ್ದೆ. ಅಷ್ಟರಲ್ಲೇ ನಾನಿದ್ದ ಕಡೆ ಯಾರೋ ಒಬ್ಬ ಸದ್ಗೃಹಸ್ಥರು ಬಂದು ಕುಳಿತರು. ಮಾತುಕತೆ ಬೆಳೆದು ಪರಸ್ಪರ ಪರಿಚಯವಾಯಿತು. ಅವರೊಬ್ಬ ಜವುಳಿ ವ್ಯಾಪಾರಿಗಳಂತೆ. ತುಂಬಾ ಕರುಣಾಳುಗಳು. ನನ್ನ ವೃತ್ತಾಂತವನ್ನು ಕೇಳಿ ಅವರಿಗೆ ಕನಿಕರವಾಯಿತು. ನನ್ನ ವಿಳಾಸವನ್ನು ಪಡೆದು ನನಗೊಂದು ಉದ್ಯೋಗವನ್ನು ದೊರಕಿಸಿಕೊಡಲು ತನ್ನಿಂದ ಕೈಲಾದಷ್ಟು ಪ್ರಯತ್ನಿಸುವೆನೆಂದರು. ನಾನು "ಅಂಬಾವಿಲಾಸ"ಕ್ಕೆ ಹಿಂದಿರುಗಿ ಬಂದೆ. ಆದರೆ ಮನಸ್ಸಿನಲ್ಲಿ ತಿಲಮಾತ್ರ ಶಾಂತಿಯಿರಲಿಲ್ಲ. ಒಮ್ಮೆ ಊರಿಗೆ ಹೊರಟುಹೋಗುವುದೇ ಲೇಸೆನಿಸಿತು. ಆದರೆ ಆಸೆಗೆ ಅಡಿಮುಡಿಯಿದೆಯೇ? ಇಲ್ಲೇ ಬೇರೇನಾದರೂ ಉದ್ಯೋಗವು ಲಭಿಸಬಾರದೇಕೆ? ಆ ಟೀಕೇಟು ಮಾರಾಟಕ್ಕಿಂತಲೂ ಹೆಚ್ಚಿನ ಘನಸ್ಥಿಕೆಯ ಚಾಕರಿ ಸಿಗಬಾರದೇಕೆ? ಎಂದೆನಿಸಿತು. ಅಂತೂ ಆಸೆ-ನಿರಾಸೆಗಳ ತೆರೆಗಳಿಂದ ಮನಸ್ಸು ಪ್ರಕ್ಷುಬ್ಧವಾಗಿತ್ತು. ಬೆಳಗಿನ ವರೆಗೆ ನಿದ್ದೆಯೇ ನನಗೆ ಬರಲಿಲ್ಲ. ಈಗ ಸಂಜೆ, ಚೌಪಾಟಿಯ ಪರಿಚಯದ ಮಹನೀಯರು ನನ್ನನ್ನ

ಹುಡುಕಿ ಹೊಟೇಲಿಗೆ ಬಂದಿದ್ದರು. 'ಎಂಪಾಯರ್ ಬೇಂಕಿನಲ್ಲಿ ಒಂದು ನೌಕರಿಯಿದೆಯೆಂದೂ, ಅಲ್ಲಿಯ ಹೆಡ್ ಎಕೌಂಟೆಂಟರು ತನ್ನ ಆಪ್ತ ಮಿತ್ರರೆಂದೂ ಹೇಳಿದರು."

"ಹಂ! ನನ್ನ ಮಿತ್ರರೇ? ಅವರಾರು? ಹೆಸರೇನು?"

"ಬಲವಂತ ದೇಸಾಯಿಗಳಂತೆ, ಮರಾಠರಂತೆ."

ಸಂಗತಿಯೊಂದೂ ನನಗೆ ಒಗೆಹರಿಯಲಿಲ್ಲ. 'ಜವಳಿ ವರ್ತಕ—ಬಲವಂತ ದೇಸಾಯಿ ನನ್ನ ಗೆಳೆಯ"—ಆ ಹೆಸರಿನ ಗೆಳೆಯರೇ ನನಗಿರಲಿಲ್ಲ. ತುಸುಕಾಲ ನಾನು ಯೋಚನೆಯಲ್ಲಿ ಮಗ್ನನಾದೆ. ಕೊನೆಗೊಂದು ಯೋಚನೆ ನನ್ನ ಮನಸ್ಸಿಗೆ ಹೊಳೆಯಿತು. ಇಂದಿನ ಸಂಜೆಯ ಜಹಗೀರದಾರನೇ ಬಲವಂತ ದೇಸಾಯಿಯಾಗಿರಬಹುದೆ? ಹೀಗೆ ಗಳಿಗೆಗೊಂದು ನಾಮ-ವೇಷಗಳನ್ನು ಧರಿಸುವ ಮಾನವ ಮಾಯೋತಿಗಳಿಗೆ ಬೊಂಬಾಯಿಯಲ್ಲಿ ಬರಗಾಲವಿಲ್ಲ. ಪಾಪ! ಯುವಕನು ಒಂದಕ್ಕೆ ಆಹುತಿಯಾದನೆಂದು ನನಗನಿಸಿತು.

"ಅದಿರಲಿ, ಅವರು ನಿನ್ನಿಂದ ಹಣವನ್ನೇನಾದರೂ ಪಡೆದರೆ?"

"........' ಹುಡುಗನು ನಿರುತ್ತರನಾದ.

"ಹೇಳು. ಸಂಕೋಚಪಡಬೇಡ."

'ಬರುವಾಗ ದುಡ್ಡಿನ ಚೀಲವನ್ನು ತರಲು ಮರೆತರಂತೆ. ಮೂರು ರೂಪಾಯಿಗಳಿದ್ದರೆ ಕೊಡು. ಮರುಪಾವತಿ ಮಾಡುತ್ತೇನೆ ಎಂದರು. ಕೊಡಬೇಕಾಯಿತು".

ನನ್ನ ಮನಸ್ಸಿನಲ್ಲಿದ್ದ ಸಂಶಯವೆಲ್ಲಾ ಮಾಯವಾಯಿತು.

"ಆವರು ಇಂದು ಸಂಜೆ ತಮ್ಮ ಆಫೀಸಿಗೆ ಬಂದಿದ್ದರಂತಲ್ಲವೇ? 'ತಿಂಗಳ ಆರಂಭದಿಂದ ಉದ್ಯೋಗ ದೊರೆಯುಬಹುದೆಂಬ ಆಶ್ವಾಸನೆಯಿತ್ತಿರುವರು. ನಡುವೆ ಅವರಲ್ಲಿಗೆ ಹೋಗಿ ಅವರನ್ನು ಕಾಡಬೇಡ' ಎಂದರು. ಆದರೂ ಅವರಿವರೊಡನೆ ತಮ್ಮ ಮನೆಯನ್ನು ವಿಚಾರಿಸಿ ತಮಗೆ ಉಪಕಾರ ಹೇಳೋಣವೆಂದು ಬಂದೆ" ಎಂದು ಯುವಕನು ತನ್ನ

ಕತೆಯನ್ನು ಮುಗಿಸಿದ. ಅವನ ಕಣ್ಣುಗಳು ತೊಯ್ದುವು. ಎರಡು ತಟಕು ಕಂಬನಿಗಳು ಕಪೋಲದಲ್ಲುರುಳಿ ಉಪಕಾರ ಸ್ಮರಣೆಗೈದವು.

ನನಗೆ ಮುಂದುಗಾಣಲಿಲ್ಲ. ಯುವಕನ ಅಂತರಂಗದಲ್ಲಿ ಮೊಳೆತು ಬಲಿತು, ಹೂಬಿಡುವಂತಿದ್ದ ಆಸೆಯ ಕುಡಿಯನ್ನು ಒಮ್ಮೆಲೇ ಮುರಿಯುವುದೆಂದರೆ ಹೇಗೆ ಸಾಧ್ಯ? ಇಂತಹ ದೀನ-ಅನಾಥರನ್ನು ವಂಚಿಸಿ ಹೊಟ್ಟೆ ಹೊರೆಯುವ ಆ ಜಹಗೀರದಾರನ ವರ್ತನೆಗಾಗಿ ರೋಷವೇರಿತು. ಅಂತೆಯೇ ಇಂತಹ ಗತಿಗೆಟ್ಟವರನ್ನು ರಕ್ಷಿಸುವ ಭಾರವು ಸಮಾಜದಲ್ಲಿ ಉದ್ಯೋಗ, ಸಿರಿ ಸಂಪದಗಳಿಂದ ಮೆರೆಯುವವರ ಮೇಲಿದೆಯೆಂಬ ಭಾವನೆಯೂ ತಲೆದೋರಿತು. ಸಾವಧಾನನಾಗಿ ಯುವಕನ ತಪ್ಪು ತಿಳುವಳಿಕೆಗಳನ್ನು ತಿದ್ದಿದೆ. "ಚಿಂತೆಯಿಲ್ಲ, ಆದದ್ದಾಯಿತು. ನೀನು ನಮ್ಮಲ್ಲಿ ಇರು. ಒಂದಲ್ಲೊಂದೆಡೆ ಉದ್ಯೋಗವು ದೊರಕದಿರಲಾರದು." ಎಂದು ಅವನನ್ನು ಸಂತಯಿಸಿದೆ.

ಏಳೆಂಟು ದಿನಗಳ ತನಕ ಯುವಕನು ನಮ್ಮಲ್ಲಿಯೇ ಇದ್ದ. ಅನಂತರ ನಮ್ಮ ಮೆನೇಜರರ ಶಿಫಾರಸು,ಪ್ರಯತ್ನಗಳ ಫಲವಾಗಿ ಜಪಾನಿ ವಾಣಿಜ್ಯ ಸಂಸ್ಥೆಯೊಂದರಲ್ಲಿ ಅವನಿಗೆ ಗುಮಾಸ್ತೆ ಕೆಲಸವು ಸಿಕ್ಕಿತು.

ಂಂ ಂಂ ಂಂ

ನಮ್ಮ ಅರ್ಧ ವರ್ಷದ ಎಕೌಂಟ್ಸ್ ಮುಗಿಯಿತು. ಬಿಡುವು ಸಾಕಷ್ಟು ದೊರಕತೊಡಗಿತು. ಒಮ್ಮೊಮ್ಮೆ ಸಂಜೆಗೆ ಸಿನೆಮಕ್ಕೆ ಹೋಗುವ ಹುಚ್ಚೂ ನನಗಿತ್ತು. ಅಂದು 'ಶಾಲಿನಿ ಥಿಯೇಟರ್'ನಲ್ಲಿ ಲೊರೆಲ್ ಎಂಡ್ ಹಾರ್ಡಿಯವರ 'ಬ್ಲೊಕ್ ಹೆಡ್ಸ್' ಎಂಬ ಚಿತ್ರಕ್ಕೆ ಹೋಗಿದ್ದೆ.

ಥಿಯೇಟರಿಗೆ ಮುಟ್ಟುವಾಗ ಗಂಟೆ ಆರಾಗಿದ್ದರೂ ದೇಖಾವೆಯು ಪ್ರಾರಂಭವಾಗಿರಲಿಲ್ಲ. ಆದರೆ ನಾನು ಟಿಕೇಟು ಪಡೆದು ಒಳಗೆ ಹೋಗಿ ಕುಳಿತುಕೊಳ್ಳುವಷ್ಟರಲ್ಲಿ ಬಾಗಿಲಿನ ಕಪ್ಪು ಪರದೆಗಳನ್ನೆಳೆದರು ಕತ್ತಲಾಯಿತು. ರಜತ ಪರದೆಯ ಮೇಲೆ ಜಾಹೀರಾತುಗಳು ಒಂದರ ಹಿಂದೆ ಒಂದಾಗಿ ಬರತೊಡಗಿದುವು.

ಮುಖದ ಬೆವರನ್ನೊರಸಿ, ಅತ್ತಿತ್ತ ನೋಡಿದೆ. ನಾನು ಕುಳಿತಲ್ಲೇ ಹಿಂಬದಿಯಲ್ಲಿ ಇಬ್ಬರು ವ್ಯಕ್ತಿಗಳು ಮಾತನಾಡುತ್ತಿದ್ದರು. ಮಾತುಕತೆ ಇಂಗ್ಲೀಷಿನಲ್ಲಿ ನಡೆಯುತಿತ್ತು ವ್ಯಕ್ತಿಗಳಾರೆಂದು ಮಾತ್ರ ಗುರುತಿಸಲಾಗುತಿದ್ದಿಲ್ಲ.

"ನಿನೇಕೆ ಹೆದರುತ್ತಿ? ನಾನಿದ್ದೇನಷ್ಟೆ?........ಅವರ ಪರಿಚಯ ನನಗೆ ಚೆನ್ನಾಗಿದೆ. ಅದು ಇಂದು ನಿನ್ನೆಯದಲ್ಲ—ಪೂನಕ್ಕೆ ಹೋಗಿರುವರಂತೆ——ಎರಡು ಮೂರು ದಿನಗಳಲ್ಲೇ ಬರುವರಂತೆ—ನಿನಗೆ ಅದು ಸಿಕ್ಕಿದಂತೆಯೇ!"

ಫಕ್ಕನೆ ನನಗೆ ಆ ಯುವಕನ ನೆನಪಾಯಿತು. ಜಹಗೀರದಾರ ಯಾನೆ ದೇಸಾಯಿಯ ನೆನಪೂ ಬಂತು. ಕಂಠ ಸ್ವರದಲ್ಲಿಯೂ ತುಂಬಾ ಹೋಲಿಕೆಯಿತ್ತು. ಆದರೆ '....ಛೆ, ಈ ವ್ಯಕ್ತಿ ಯಾರೋ.... ಅವರಾರೋ?' ಎಂದು ನಾನು ಸುಮ್ಮನಾದೆ. ಜಾಹೀರಾತುಗಳನ್ನು ಓದುತ್ತ ಕುಳಿತೆ.

ಥಿಯೇಟರು ಬೆಳಗಿತು. ವ್ಯಕ್ತಿಯನ್ನು ನೋಡಲು ಮುಖವನ್ನು ಉತ್ಸುಕತೆಯಿಂದ ಹಿಂತಿರುಗಿಸಿದೆ. ಅಂದು ಆಫೀಸಿಗೆ ಬಂದ ವ್ಯಕ್ತಿಯೇ ಇದು ಎಂಬುದರಲ್ಲಿ ಏನೂ ಸಂದೇಹವಿಲ್ಲ. ಆದರೆ ಆ ವ್ಯಕ್ತಿಯ ಇಂದಿನ ವೇಷಭೂಷಣಗಳೇ ಬೇರೆ. ಸಂಪೂರ್ಣ ಇಂಗ್ಲಿಷ್ ಪೋಷಾಕು—ಫುಲ್ ಸೂಟ್) ಸರಿ! ಪಕ್ಕದಲ್ಲಿ ಕುಳಿತ ಕನ್ನಡಕದ ತರುಣನೇ ಪ್ರಕೃತದ ಆಹುತಿಯೆಂದು ನಾನು ತಿಳಿದುಕೊಂಡೆ. "ಇವನಿಗೆ ಮದ್ದರೆಯಲು ಇದೇ ಸಂದರ್ಭ"ವೆಂದು ಮನಸ್ಸಿನಲ್ಲೇ ಯೋಚಿಸಿದೆ.

ಪುನಃ ಕತ್ತಲಾದೊಡನೆ ಕುಳಿತಲ್ಲಿಂದೆದ್ದು ಮೆಲ್ಲನೆ ಹೊರಗೆ ಬಂದೆ. ಸಮೀಪದ ಪೋಲಿಸ್ ಸ್ಟೇಶನಿಗೆ ಫೋನ್ ಮಾಡಿದೆ—"ಸಬ್ ಇನ್ಸ್‌ಪೆಕ್ಟರರು ಎರಡು ಜವಾನರೊಂದಿಗೆ ಬರಲಿ" ಎಂದು. ಮರಳಿ ನನ್ನ ಸೀಟಿಗೆ ಬಂದು ಕುಳಿತು ಚಿತ್ರವನ್ನು ನೋಡುತ್ತಿದ್ದೆನಾದರೂ ನನ್ನ ಮನಸ್ಸು ಆ ವ್ಯಕ್ತಿಯಲ್ಲೇ ನಾಟಿತ್ತು.

ಸುಮಾರು ಮುಕ್ಕಾಲು ತಾಸು ಸರಿಯಿತು. ಸಬ್ ಇನ್ಸ್‌ಪೆಕ್ಟರರು ಜವಾನರೊಂದಿಗೆ ಶಾಲಿನಿ ಥಿಯೇಟರಿಗೆ ಬಂದೇ ಬಂದರು. ಅವರನ್ನು ಗುಟ್ಟಿನಲ್ಲಿ ಕರೆದು ಎಲ್ಲಾ ಸಂಗತಿಯನ್ನು ವಿವರಿಸಿ ಹೇಳಿದೆ. ಅವರೂ ಸ್ವಲ್ಪ ಧೈರ್ಯಶಾಲಿಗಳಾಗಿದ್ದರು. ಮತ್ತೇನು? ಹುಲಿಯು ಬೋನಿನಲ್ಲಿ ಸಿಲುಕಿತು.

'ದೇಸಾಯಿ ಯಾನೆ ಜಹಗೀರದಾರ ಯಾನೆ....'ಯು ಆರು ತಿಂಗಳು ಗಳ ವರೆಗೆ ಸೆರೆಮನೆಯಲ್ಲಿ ರಾಜ ಅತಿಥಿಯಾದ.

ವಿಚಾರಣೆಯ ಸಮಯದಲ್ಲಿ ಈ ವ್ಯಕ್ತಿಯ ಕುರಿತು ತಿಳಿದುದೇ ನೆಂದರೆ—"ಅವನು ಉತ್ತರಕನ್ನಡದವನು. ಕನ್ನಡ, ಮರಾಠಿ, ಹಿಂದೀ, ಮಾತನಾಡಬಲ್ಲವನು. ಬಿ. ಎ. ಯಲ್ಲಿ ಐದಾರು ಬಾರಿ ಫೇಲಾದವನು. ಉದ್ಯೋಗಾನ್ವೇಷಣೆಗಾಗಿ ಬೊಂಬಾಯಿಗೆ ಬಂದವನು, ಸಿಕ್ಕಿದವರನ್ನೆಲ್ಲ ಬೇಡಿ ಕಾಡಿ, ಬಳಲಿ ಬೇಸತ್ತವನು. ತನ್ನಂತೆಯೇ ನೂರಾರು ಮಂದಿ ನಿರುದ್ಯೋಗಿಗಳು ಹೊಟ್ಟೆ ಪಾಡಿಗಾಗಿ ಪೇಚಾಡುವುದನ್ನು ಕಂಡು ಅವರ ಮೇಲೆ ಸಹಾನುಭೂತಿಪಡುವುದರ ಬದಲಾಗಿ, ಅವರನ್ನು ವಂಚಿಸಿ, ಆಸೆ ತೋರಿಸಿ, ಸುಲಿಯುವ ದುರಾಸೆಯನ್ನು ಕಟ್ಟಿಕೊಂಡವನು. ಅಂತೂ ಗೋಮುಖವ್ಯಾಘ್ರ. ಅವನು ಕಳೆದ ಮೂರು ತಿಂಗಳುಗಳಿಂದ ನಿಶ್ಚಿಂತ ಜೀವನವನ್ನನುಭವಿಸಿದ್ದನು" ಇಷ್ಟೇ. ತೀರ್ಪು ಕೇಳಿದ ಬಳಿಕ ದೇಸಾಯಿ ಯಾನೆ ಜಹಗೀರದಾರ......ಯಾನೆ....—?ಯ ಹೇಳಿಕೆಯೇನೆಂದರೆ —"ಒಬ್ಬನು ಸಕಲರನ್ನು ಕೆಲಕಾಲ ವಂಚಿಸಬಲ್ಲನು. ಕೆಲವರನ್ನು ಸದಾಕಾಲ ವಂಚಿಸಬಲ್ಲನು. ಆದರೆ ಸಕಲರನ್ನೂ ಸದಾಕಾಲ ವಂಚಿ ಸಲು ಯತ್ನಿಸುವುದು ಮೂಢತನ. ಅದೇ ನನ್ನ ಅಪರಾಧ"ಎಂದಾಗಿತ್ತು.

---

# M-353

ವಧುವು ಬೇಕು—ಸರಕಾರೀ ಉದ್ಯೋಗದಲ್ಲಿರುವ ಸುಮಾರು 45 ವರ್ಷ ಪ್ರಾಯದ, ಭಾರದ್ವಾಜ ಗೋತ್ರದ, ಅಯ್ಯಂಗಾರ್ ವಿಧುರರೊಬ್ಬರಿಗೆ 20 ವರ್ಷಗಳಿಗೆ ಮೀರದ, ಗೃಹಕೃತ್ಯದಲ್ಲಿ ನಿಪುಣೆಯಾದ, ಸ್ವಜಾತೀ ಸುಂದರಿಯು ಬೇಕಾಗಿದ್ದಾಳೆ. ಸ್ವಲ್ಪ ಮಟ್ಟಿಗೆ ವರದಕ್ಷಿಣೆಯನ್ನು ನಿರೀಕ್ಷಿಸಲಾಗುವುದು. ಪತ್ರವ್ಯವಹಾರ ಗುಟ್ಟಿನಲ್ಲಿ. ಹೆಚ್ಚಿನ ಮಾಹಿತಿಗೆ –M352 C/o 'ನವಭಾರತ' ಮದ್ರಾಸು.

**ವರನು ಬೇಕು**—ಗೌರವರ್ಣದವಳು, ಕೃಶಾಂಗಿ, ಗಾಯನದಲ್ಲಿ ಸಮರ್ಥೆ, ಹಾಗೂ ಎಸ್. ಎಸ್. ಎಲ್. ಸಿ. ಉತ್ತೀರ್ಣಳಾದ ಕ್ರಿಶ್ಚಿಯನ್ ರೂಪವತಿಗೆ ಅನುರೂಪನಾದ, 25 ವರ್ಷಗಳಿಗೆ ಮೇಲ್ಪಡದ, ಯೋಗ್ಯ, ವಿದ್ಯಾವಂತ (ಕಡಿಮೆ ಪಕ್ಷ ಬಿ. ಎ.) ವರನು ಬೇಕು. ಜಾತಿ ಭೇದವಿಲ್ಲ. ವಿದುರರಾಗಲೀ 25ಕ್ಕೆ ಮೀರಿದವರಾಗಲೀ ಬರೆಯುವುದು ಬೇಡ. ಭಾವಚಿತ್ರಗಳೊಂದಿಗೆ ಪತ್ರವ್ಯವಹಾರ. M–353 C/o 'ನವಭಾರತ' ಮದ್ರಾಸು.

**ವರನು ಬೇಕು**—ಸೀಮೆಯಿಂದ ಮರಳಿದ, ಸುಮಾರು 30 ವರ್ಷ ಪ್ರಾಯದ ಅವಿವಾಹಿತ, ಅಬ್ರಾಹ್ಮಣ ಕನ್ನಿಕೆಗೆ, ಶ್ರೀಮಂತ ಕುಟುಂಬದ, ವಿದ್ಯಾವಂತ, ಸರಕಾರಿ ನೌಕರ ಯಾ ಜಮೀನ್ದಾರ ವರನು ಬೇಕು. ಪ್ರಾಯ 25–30 ಅನುಕೂಲ. ವಧುವು ರೂ. 5000 ಕೊಡಲು ಸಿದ್ಧಳಿದ್ದಾಳೆ. ಮಾಹಿತಿಗೆ M–354 C/o 'ನವಭಾರತ' ಮದ್ರಾಸು.

ಮೇಲಿನದು 'ನವಭಾರತ' ದಿನಪತ್ರಿಕೆಯ ಕಳೆದ ತಿಂಗಳ ಒಂದು ಸಂಚಿಕೆಯಲ್ಲಿ ಪ್ರಕಟವಾದ "ಮೆಟ್ರಿಮೋನಿಯಲ್" (ವೈವಾಹಿಕ ಜಾಹೀರಾತು) ಕಾಲಂ. ಅದನ್ನು ಓದುತಿದ್ದ ವ್ಯಕ್ತಿ ರಾಮಸ್ವಾಮಿ, ಎಂ.ಎಸ್‌ಸಿ. ಹೆಚ್ಚಿಗೆ ಪರಿಚಯ ಬೇಕಾದರೆ, ನವರೋಜಿ ರಿಸರ್ಚ್ ಲೆಬೊರೆಟರಿ

ಯಲ್ಲಿ ಕೆಲಸಮಾಡುತಿದ್ದ ಒಬ್ಬ ಸುಧಾರಿತ ಅಯ್ಯಂಗಾರ್ ಯುವಕ. ರಾಮುಸ್ವಾಮಿಯ ದೃಷ್ಟಿಯು ಆಕರ್ಷಿತವಾದುದೆಂದರೆ, ಅದು ಎರಡನೆಯ ಜಾಹೀರಾತಿನ ಕಡೆಗೆ ಮಾತ್ರ. ಅದರಲ್ಲಿ 'ಕ್ರಿಶ್ಚಿಯನ್' ಎಂಬ ಶಬ್ದದ ಬದಲಿಗೆ 'ಅಯ್ಯಂಗಾರ್' ಎಂದಿದ್ದರೆ ಎಷ್ಟು ಚೆನ್ನಾಗುತ್ತಿತ್ತು ಎಂದು ರಾಮುಸ್ವಾಮಿ ತನ್ನಲ್ಲಿಯೇ ಎಣಿಸತೊಡಗಿದ. ಅಂತಹ ಸಂದರ್ಭದಲ್ಲಿ, ಆ ಅನಾಮಧೇಯ ವಧುವಿಗೂ ಅವನೂ ಒಬ್ಬ ಉಮೇದ್ವಾರನಾಗುತಿದ್ದ ನೆಂಬುವುದರಲ್ಲಿ ಸಂದೇಹವಿರಲಿಲ್ಲ. ಅವನ ಮಟ್ಟಿಗೆ ಹೇಳುವುದಾದರೆ, 'ಕ್ರಿಶ್ಚಿಯನ್ ಎಂಬ ಪದವಿದ್ದುದರಿಂದೇನೂ ಬಾಧಕವಿರಲಿಲ್ಲ. ಆದರೆ ಶ್ರೇಷ್ಠ ಅಯ್ಯಂಗಾರ್ ಮನೆತನದಲ್ಲಿ ಹುಟ್ಟಿ, ಸಂಪ್ರದಾಯವೇ ಮೂರ್ತೀಭವಿಸಿದಂತಿದ್ದ ತಂದೆಗೆ ವಿರುದ್ಧವಾಗಿ 'ಕ್ರಿಶ್ಚಿಯನ್' ತರುಣಿಯೊಬ್ಬಳನ್ನು ವಿವಾಹವಾದರೆ ಜನರೇನೆಂದಾರು, ತನ್ನ ಗತಿಯೇನು? ಎಂಬ ಈ ಪ್ರಶ್ನೆಗಳಿಗೆ ಏನೇನೋ ಉತ್ತರಗಳನ್ನು ಕಲ್ಪಿಸಿ, ಅವನು ತಲೆಕರಡು ಮಾಡತೊಡಗಿದ್ದ. ಅವನ ಫಲವತ್ತಾದ ಮೆದುಳು 'ಕ್ರಿಶ್ಚಿಯನ'ಳೊಂದಿಗೆ ತನ್ನ ಪಾಣಿಗ್ರಹಣವಾದರೆ ಆಗಬಹುದಾದ ಪರಿಣಾಮಗಳ 'ರಿಸರ್ಚ್' ಮಾಡತೊಡಗಿತ್ತು. ತಂದೆಯ ಸಿಟ್ಟಿಗೆ ಹೆದರಿ ಕಂಗಾಲಾಗುತಿದ್ದ ರಾಮುಸ್ವಾಮಿಯು ಕ್ರಿಶ್ಚಿಯನ್ ತರುಣಿಯೊಂದಿಗೆ ವಿವಾಹವಾಗುವನೆಂದರೆ ಯಾರಾದರೂ ನಂಬಬಲ್ಲರೇ? ಆದರೆ ಅಂತಹ ನೂರಾರು ಜಾಹೀರಾತುಗಳನ್ನು ಕಂಡಿದ್ದ ರಾಮುಸ್ವಾಮಿಗೆ ಒಮ್ಮೆ ಅವುಗಳ ಗುಟ್ಟನ್ನು ತಿಳಿಯಬೇಕೆಂಬ ಅಸೆ ಬಲವಾಗಿತ್ತು. ಅದು ಕಾರಣ ಬರೇ ತಮಾಷೆಗಾಗಿ–ಈ ಸಲ ತಾನೂ ಒಬ್ಬ ಉಮೇದ್ವಾರನಾಗುವುದೆಂದು ಅವನು ನಿರ್ಧರಿಸಿದ. ಪೇಪರು ಮುಗಿಸುವ ಮುಂಚೆ ತನ್ನ ಭಾವಚಿತ್ರದ ಪ್ರತಿಯೊಂದಿಗೆ ಉಮೇದ್ವಾರಿಕೆಯ ಪತ್ರವನ್ನು ಒಂದು ಲಕೋಟೆಯಲ್ಲಿ ತುರುಕಿಸಿ, ಮೇಜಿನ ಮೇಲೆ ಬಿದ್ದುಕೊಂಡಿದ್ದ ದಪ್ಪ ಗ್ರಂಥದೊಳಗೆ ಅದನ್ನು ಸೇರಿಸಿ ಅವನು ಮಲಗಿಕೊಂಡ.

ಮರುದಿನ ಮುಂಜಾನೆಯೇ, ರಾಜುವಿನ ಮುಖಾಂತರ ಆ ಪತ್ರವು ಕಳುಹಿಸಲ್ಪಟ್ಟಿತ್ತು. ಅದು ಮೈಲಾಪುರ ಪೋಸ್ಟ್ ಆಫೀಸಿನ ಪೆಟ್ಟಿಗೆಯೊಳಗೆ ಬಿದ್ದಾಯಿತು.

ಎರಡು ದಿನಗಳ ತರುವಾಯ—

ಶ್ರೀನಿವಾಸನ್‌ರವರು ತನ್ನ ಓದುವ ಕೋಣೆಯಲ್ಲಿ ಕುಳಿತು ಟಪ್ಪಾಲು ನೋಡುತಿದ್ದರು. ಶ್ರೀನಿವಾಸನ್‌ರವರೆಂದರೆ ಮದ್ರಾಸಿನ ಪ್ರೆಸಿಡೆನ್ಸಿ ಮೆಜಿಸ್ಟ್ರೇಟರು. ರಾಮಸ್ವಾಮಿಯು ಅವರ ಮಗ. ರಾಮಸ್ವಾಮಿಯ ತಾಯಿಯು ಕಣ್ಮರೆಯಾಗಿ ಕೆಲವೇ ತಿಂಗಳುಗಳಾಗಿದ್ದುವಷ್ಟೆ! ಆದುದರಿಂದಲೇ ಇರಬಹುದು—ಕಳೆದ ಎರಡು ಮೂರು ತಿಂಗಳುಗಳಿಂದ ಮೆಜಿಸ್ಟ್ರೇಟರ ಚರ್ಯೆಯು ತೀರಾ ವಿಲಕ್ಷಣವಾಗಿತ್ತು. ಅವರು ಯಾವಾಗಲೂ ಏಕಾಂತದಲ್ಲಿಯೇ ಇರಲು ಆಶಿಸುತಿದ್ದರು. ಬಿಡುವಿರುವಾಗಲೆಲ್ಲಾ ತಿರುಗಾಡಲು ಕೂಡ ಹೋಗದೆ, ಇಝಿಚೆಯರಿನಲ್ಲಿ ಕುಳಿತು ಆಲೋಚನಾ ಪರರಾಗುತ್ತಿದ್ದರು. ನೆಂಟರಿಷ್ಟರು ಯಾರಾದರೂ ಬಂದರೆ ಅವರೊಡನೆ ಎಷ್ಟು ಬೇಕೋ ಅಷ್ಟೇ ಮಾತುಕತೆ ಬೆಳೆಯಿಸುತಿದ್ದರು. ಸೇವಕರಿಗೂ ಅವರ ಕೋಣೆಯೊಳಗೆ ಮುಖ್ಯವಾಗಿ ಟಪ್ಪಾಲು ತೆರೆಯುವಾಗ–ಬರಲು ಮುಂಚಿನಂತೆ ಅನುಮತಿಯಿರಲಿಲ್ಲ. ಅಂತೂ, ಸಂಸಾರದಲ್ಲಿ ಜಿಗುಪ್ಸೆಹುಟ್ಟಿ, ಪಾರಮಾರ್ಥಿಕ ವಿಚಾರಗಳಲ್ಲಿ ಲೀನರಾಗಿರುವವರಂತೆ ಅವರ ದಿನಚರಿಯಾಗಿತ್ತು.

ಆ ದಿನ ಅವರು ಬಿಚ್ಚಿದ ಲಕೋಟೆಗಳೊಳಗಿನ ಪತ್ರಗಳಲ್ಲಿ ಒಂದು ಈ ತೆರನಾಗಿತ್ತು.

ಮೈಲಾಪುರ,

22–6–1944

M–352 C/o 'ನವಭಾರತ'

— ಇವರಿಗೆ.

ಕಳೆದವಾರ 'ನವಭಾರತ'ವಲ್ಲಿ ಪ್ರಕಟವಾದ ತಮ್ಮ ಜಾಹೀರಾತನ್ನು ಓದಿ, ನಾನು ನಿಮ್ಮನ್ನು ವಿವಾಹವಾಗಲಿಚ್ಛಿಸುತ್ತೇನೆ. ನನ್ನ ಪ್ರಾಯ ಬರೇ 24ವರ್ಷ. ಬನಾರಸ್ ಹಿಂದೂ ಯುನಿವರ್ಸಿಟಿಯ ಎಮ್. ಎಸ್‌ಸಿ. ಪ್ರಕೃತ ನವರೋಜಿ ರಿಸರ್ಚ ಲೆಬೊರೆಟರಿಯಲ್ಲಿ ಅಸಿಸ್ಟಾಂಟ್. ತಿಂಗಳಿಗೆ 100ರೂ. ವೇತನವಿದೆ. ಇಷ್ಟರಲ್ಲೇ, ಡ್ಯಾರೆ

ಕ್ಟರರ ಪ್ರಶಸ್ತಿಗೆ ಪಾತ್ರನಾಗಿದ್ದೇನೆ. ಸ್ವಲ್ಪ ಸಮಯದಲ್ಲೇ ಫಸ್ಟ್ ಅಸಿಸ್ಟಾಂಟನಾಗುವ ನಿರೀಕ್ಷೆಯಿದೆ. ಸಮ್ಮತವೆಂದಾದರೆ ಭಾವಚಿತ್ರದೊಡನೆ ಕೂಡಲೆ ಬರೆಯುವುದು. ಅನಂತರ ಮುಂದಿನ ಏರ್ಪಾಡು. ಪತ್ರವ್ಯವಹಾರವು ಗುಟ್ಟಿನಲ್ಲಾಗಬೇಕೆಂದು ಅಪೇಕ್ಷೆಯಿದೆ.

ಇತಿ

ಪಿ. ಎಸ್. ರಾಮಸ್ವಾಮಿ ಅಯ್ಯಂಗಾರ್.

ಪತ್ರದಲ್ಲಿರುವುದು ಖಂಡಿತವಾಗಿಯೂ ರಾಮಸ್ವಾಮಿಯ ಹಸ್ತಾಕ್ಷರ. ಜತೆಯಲ್ಲಿ ರಾಮಸ್ವಾಮಿಯ ಭಾವಚಿತ್ರವಿದೆ. ಶ್ರೀನಿವಾಸನ್‌ರವರಿಗೆ ತನ್ನ ಮಗನ ಪತ್ರ ತನಗೇ ಬಂದುದು ಹೇಗೆಂದು ಪ್ರಥಮತಃ ಮನಸ್ಸಿಗೆ ಸುಳಿಯಲಿಲ್ಲ. ಅವರು ತುಸು ಹೊತ್ತು ಯೋಚಿಸಿದರು. ಕ್ರಮೇಣ ಅವರ ಮುಖದಲ್ಲಿ ಕೆಂಪೇರಿತು. ಅವರೇನೋ ಕಾರಣವನ್ನು ಕಂಡುಹಿಡಿದಂತಿತ್ತು.

'ರಾಮೂ,' ಎಂದು ಅವರು ಸಿಟ್ಟಿನ ಭರದಲ್ಲಿ ಮಗನನ್ನು ಕರೆದರು.

ಶ್ರೀನಿವಾಸನ್‌ರವರು ರಾಮಸ್ವಾಮಿಯನ್ನು ಸ್ವತಃ ಕರೆಯುವುದಾಗಲೀ, ಕರೆ ಕಳುಹಿಸುವುದಾಗಲೀ ಬಹಳ ಅಪರೂಪವಾಗಿತ್ತು. ಅವರಿಬ್ಬರಿಗೆ ಎಣ್ಣೆ ಸೀಗೆಯೆಂದಲ್ಲ. ಸಂದರ್ಭ ಬಿದ್ದಾಗ, ಅವರು ಮಾತನಾಡದಿರುತ್ತಿರಲಿಲ್ಲ. ಆದರೆ ಅದು ತಾರುಗಳಲ್ಲಿ ಕಳುಹಿಸುವ ಸಮಾಚಾರ ಪ್ರತ್ಯುತ್ತರಗಳ ಹಾಗೆ ವಿನಾ ಸಂಭಾಷಣೆಯೆನಿಸುವಷ್ಟು ಮಾನುಷವಾಗಿರಲಿಲ್ಲ. ಅಂದು ತಂದೆಯವರು ಅಕಸ್ಮಾತ್ತಾಗಿ ತನ್ನನ್ನು ಕರೆದೊಡನೆ ಆಚೆ ಕೋಣೆಯಲ್ಲಿದ್ದ ರಾಮಸ್ವಾಮಿಯು ಗಾಬರಿಗೊಂಡ. ಮರುಕ್ಷಣದಲ್ಲೆ, ತಂದೆಯೆದುರಿಗೆ ಬಂದು ನಿಂತ.

'ಏನಪ್ಪಾ ಕರೆದಿರೇ?' ಅವನು ನಿಧಾನವಾಗಿ ಕೇಳಿದ.

'ಹೌದು.'

'ಯಾಕೆ?'

'ಯಾಕೆಂದು ಹೇಳಲಿ, ನಿನ್ನ ಕರ್ಮ ತೋರಿಸಲಿಕ್ಕೆ ಇದೇನು ನೋಡು!'

ರಾಮಸ್ವಾಮಿಗೆ ತಾನು ತಮಾಷೆಗೆಂದು ಗುಟ್ಟನಲ್ಲಿ ಬರೆದ ಪತ್ರವು ತಂದೆಯವರ ಕೈಸೇರಿದೆಯೆಂದು ತಿಳಿದೊಡನೆ ಒಮ್ಮೆಲೇ ಸಿಡಿಲೆರಗಿದಂತಾಯಿತು. ಅವನು ನಿರುತ್ತರನಾದ. ಸ್ವಲ್ಪಕಾಲ ಇಬ್ಬರೂ ಮೌನ ತಾಳಿದರು.

'ಯಾಕೆ ನಿನಗೆ ದೇವರು ಈ ರೀತಿ ಬುದ್ಧಿ ಕೊಟ್ಟನೊ'!'

'...............' ಮೌನ.

"ಅಪ್ಪನ ಮುಖಕ್ಕೆ ಮಸಿ ಬಳೆಯುವ ಯೋಚನೆ--ಅಲ್ಲವೇ?"

ರಾಮಸ್ವಾಮಿಗೆ ತುಟಿದೆರೆಯಲು ಧೈರ್ಯ ಬರಲಿಲ್ಲ. ಟಪ್ಪಾಲಿಗೆ ಕಳುಹಿಸಿದ ಪತ್ರವು ತಂದೆಯವರಿಗೆ ಹೇಗೆ ಬಂತೆಂಬ ಸಮಸ್ಯೆಯೇ ಅವನ ಮನಸ್ಸನ್ನು ಪೀಡಿಸುತಿತ್ತು.

"ಇಲ್ಲಪ್ಪಾ,...ನನಗೆ...."ಎಂದು ಅವನು ಏನೋ ಹೇಳಬೇಕೆಂದಿದ್ದ.

"ಏನು!! ನಿನಗೆ ಗೊತ್ತಿಲ್ಲವೆ? ಇದು ನಿನ್ನ ಸುಟ್ಟ ಮೋರೆಯಲ್ಲವೆ?" ಎಂದು ಶ್ರೀನಿವಾಸನ್‌ರವರು ಮಗನ ಭಾವಚಿತ್ರವನ್ನು ಅವನಿಗೆ ತೋರಿಸಲು ಅದನ್ನು ಮುಂದೆ ಚಾಚಿದರು.

ರಾಮಸ್ವಾಮಿಗೆ ಕತ್ತಿಯಿಂದ ಇರಿದಂತಾಯಿತು ಅವನು ಪುನಃ ನಿರುತ್ತನಾದ.

"ಸರಿ' ನಿನ್ನಂತಹ ಮಗನೊಬ್ಬನನ್ನು ಪಡೆದು, ಸಾಕಿ, ಸಲಹಿ, ಎಸ್. ಎಸ್‌ಸಿ. ಮಾಡಿಸಿದುದಕ್ಕೆ ನನ್ನ ಜನ್ಮ ಸಾರ್ಥಕವಾದಂತಾಯಿತು. ನಡೆಯಾಚೆ........." ಎಂದು ಶ್ರೀನಿವಾಸನ್‌ರವರು ಪತ್ರವನ್ನೂ ಚಿತ್ರವನ್ನೂ ಹರಿದು ಬಿಸಾಡಿದರು.

ಕೋಣೆಗೆ ಹಿಂದಿರುಗಿ ಬಂದ ರಾಮಸ್ವಾಮಿಗೆ "ಪತ್ರವು ತಂದೆಯವರ ಹಸ್ತಗತವಾದುದು ಹೇಗೆ?" ಎಂಬ ಒಂದೇ ಒಂದು ಪ್ರಶ್ನೆ ಮನಸ್ಸಿನಲ್ಲಿ. ಆ ಚಿಂತೆಯಲ್ಲೆ, ಅವನು ಕಳವಳಗೊಂಡ. ಕೊನೆಗೆ ಇದು ರಾಜುವಿನ ಮಾಟವಾಗಿರಬೇಕೆಂದು ಅವನು ನಿರ್ಧರಿಸಿದ. "ಪ್ರಾಯಶಃ ರಾಜುವು ವಿಶ್ವಾಸಘಾತ ಮಾಡಿರಬೇಕು. ಇಲ್ಲವಾದರೆ ಅಜಾಗರೂ

ಕತೆಯಿಂದ ಪತ್ರವನ್ನು ಅಪ್ಪನ ಮೇಜಿನ ಮೇಲೆ ಬಿಟ್ಟುಹೋಗಿರಬೇಕು" ಎಂಬುದಾಗಿ ಅವನು ಸಂಕಲ್ಪ ಮಾಡಿದ.

ತಂದೆಯು ಮಗನನ್ನು ಕರೆದಂತೆ, ಮಗನು ರಾಜುವನ್ನು ಕರೆದು ಅವನನ್ನು ಚೆನ್ನಾಗಿ ಗದರಿಸಹತ್ತಿದ.

"ರಾಜೂ, ಈ ರೀತಿಯಲ್ಲಿ ನೀನು ಕುತ್ತಿಗೆ ಕೊಯ್ದುದು ಸರಿಯೆ?"

"ಯಾಕೆ ಸರ್, ನನ್ನಿಂದೇನಾಗಿದೆ.......?" ನಡುಗುತ್ತಲೆ ಎಂದ ರಾಜು.

'ನಿನ್ನಿಂದೇನಾಯಿತೇ!! ನಾನು ನಿನ್ನೆ ಬೆಳಿಗ್ಗೆ ಕೊಟ್ಟ ಪತ್ರ....?'

'ಏನಾಯಿತು!'

'ಅದನ್ನೇನು ಮಾಡಿದೆ?'

'ಟಪ್ಪಾಲಿಗೆ ಹಾಕಿದ್ದೇನೆ, ಸರ್!'

"ಖಂಡಿತವೆ?"

'ಖಂಡಿತ'

'ಎನು! ನನ್ನೊಡನೆಯೂ ಸುಳ್ಳಾಡುತ್ತಿಯಾ? ನೀನು ಅಪ್ಪನಿಗೆ ಅದನ್ನು ತೋರಿಸಲಿಲ್ಲವೆ?'

"ನನ್ನ ಮಗುವಿನಾಣೆ ಸರ್! ಅದನ್ನು ಆಗಲೇ ಪೋಸ್ಟ್ ಮಾಡಿದ್ದೇನೆ. ಯಾರಿಗೂ ಅದನ್ನು ತೋರಿಸಲಿಲ್ಲ."

"ಹಾಗಾದರೆ ಅದು ಅಪ್ಪನ ಮೇಜಿನ ಮೇಲೆ ಹೇಗೆ ಬಿತ್ತು? ದೆವ್ವ ತಂದು ಹಾಕಿತೆ?"

ರಾಜುವು ಸುಮ್ಮನಾದ. ಪಾಪ! ಸಂಗತಿಯೊಂದು ಅವನಿಗೆ ಅರ್ಥವಾಗಿರಲಿಲ್ಲ.

'ಸುಮ್ಮಗೆ ಸಿಟ್ಟಾಗಬೇಡಿ ಸರ್. ನಾನು ನಿಜವಾಗಿಯೂ ನಿರಪರಾಧಿ' ಎಂದು ಅವನು ಮಗದೊಮ್ಮೆ ಅಂಗಲಾಚಿ ಹೇಳಿದ..

ಆದರೆ ರಾಮಸ್ವಾಮಿಯ ತಾಳ್ಮೆಯು ಮಿತಿ ಮೀರಿತು.

'ಸಾಕು, ಹೋಗಾಚೆ........' ಎಂದು ಕಣ್ಣು ಕೆರಳಿಸಿ ಅವನು ರಾಜುವನ್ನು ಹೊರಗೆ ಕಳುಹಿಸಿದ.

ಅಂದಿನಿಂದ ಇಂದಿನ ವರೆಗೂ ರಾಮಸ್ವಾಮಿಗೆ ವಿಶ್ವಾಸಾರ್ಹ ಸೇವಕ ರಾಜುವಿನ ಮೇಲೆ ತೀರಾ ಅವಿಶ್ವಾಸ.

ನಿಜಸ್ಥಿತಿಯಾದರೋ ತಪ್ಪು ರಾಜುವಿನದಾಗಿರಲಿಲ್ಲ. ಅದು ರಾಮ ಸ್ವಾಮಿಯದೇ ಆಗಿತ್ತು. ತಾನು ಬರೆದ ಲಕೋಟೆಯ ವಿಳಾಸದಲ್ಲಿ M—353 ಎಂಬುದರ ಬದಲಿಗೆ M—352 ಎಂದು ಬರೆದುದೇ ಅವನ ತಪ್ಪಾಗಿತ್ತು. ಮಗದೊಮ್ಮೆ ಅವನು ಆ 'ನವಭಾರತ' ಸಂಚಿಕೆಯಲ್ಲಿ ಪ್ರಕಟವಾದ ಮೊದಲಿನೆರಡು ಜಾಹೀರಾತುಗಳನ್ನು ಲಕ್ಷ್ಯಪೂರ್ವಕವಾಗಿ ಕಂಡಿದ್ದರೆ ಅವನ ತಪ್ಪು ಅವನಿಗೇ ಹೊಳೆಯುತಿತ್ತು. ಆಗ ಅಪ್ಪನು ಸಿಟ್ಟಾದುದು ತಾನು ಕ್ರಿಶ್ಚಿಯನ್ ತರುಣಿಯನ್ನು ವಿವಾಹವಾಗಲು ಬಯಸಿದುದಕ್ಕಲ್ಲ, ಅದಕ್ಕೆ ಬೇರೆಯೇ ಕಾರಣವಿದೆಯೆಂಬುದೂ ಅವನಿಗೆ ಸ್ಪಷ್ಟವಾಗುತಿತ್ತು.

ಎಷ್ಟೋ ಮಹತ್ವದ ಶೋಧಗಳನ್ನು ಮಾಡಿದ್ದ ರಾಮಸ್ವಾಮಿಗೆ, ತನ್ನ ಅಜಾಗರೂಕತೆಯಿಂದ ಸಣ್ಣದೊಂದು ತಪ್ಪನ್ನು ಕಂಡುಹಿಡಿಯ ಲಾಗದಿದ್ದುದು ರಾಜುವಿನ ಗ್ರಹಚಾರವಲ್ಲದೆ ಮತ್ತೇನು?



೪

# ಸಾಹಿತ್ಯಕೂಟ

೧

**ವಿನಂತಿ**

ಇದೇ ಬರುವ ಫೆಬ್ರವರಿ ತಾ. ೧೫ನೆಯ ಸಾಯಂಕಾಲ ಘಂಟೆ ೫-೩೦ಕ್ಕೆ ಸರಿಯಾಗಿ ಇಂದುಪುರ ವಿದ್ಯೋದಯ ಹಾಯರ್ ಎಲಿಮೆಂಟರಿ ಶಾಲಾ ಭವನದಲ್ಲಿ 'ಇಂದುಪುರ ಸಾಹಿತ್ಯಕೂಟ'ದ ಉದ್ಘಾಟನಾ ಸಮಾರಂಭವು ಜರಗಲಿರುವುದು. ಶ್ರೀಯುತ ಬಿ. ವಾಸುದೇವಾಚಾರ್ಯ ವಿದ್ವಾನ್, ಕನ್ನಡ ಪಂಡಿತ, ಸಿಟಿ ಕಾಲೇಜ್, ಇಂದುಪುರ–ಅವರು ಅಧ್ಯಕ್ಷತೆಯನ್ನು ವಹಿಸಲಿರುವರು. ಸಾಹಿತ್ಯಾಭಿಮಾನಿಗಳೆಲ್ಲರಿಗೂ ಸ್ವಾಗತವಿದೆ.

**ಕೆ. ಶ್ರೀಧರ ರಾವ್,**
**ಯು. ರಘುರಾಮ.**

೨

**ವರದಿ**

ಫೆಬ್ರವರಿ ೨೦, ೧೯೩೭ರಂದು ಸೇರಿದ 'ಇಂದುಪುರ ಸಾಹಿತ್ಯ ಕೂಟ"ದ ಪ್ರಥಮ ಮಹಾಸಭೆಯ **ವರದಿ:—**

ಹಾಜರಿ: ಶ್ರೀಯುತರು...........ಶ್ರೀಮತಿಯರು.... .. ಕುಮಾರಿಯರು.......... ಇತ್ಯಾದಿ ಸುಮಾರು ೫೦ ಜನರು.

**ನಿರ್ಣಯಗಳು.** ೧. ಇಂದುಪುರಕ್ಕೆ ಸಾಹಿತ್ಯಕೂಟವೊಂದು ಅತ್ಯಾವಶ್ಯಕವೆಂದು ಈ ಸಭೆಯು ಅಭಿಪ್ರಾಯ ಪಡುತ್ತದೆ.

೨. "ಇಂದುಪುರ ಸಾಹಿತ್ಯಕೂಟ"ದ ಬಗ್ಗೆ ಶ್ರೀ. ಕೆ. ಶ್ರೀಧರ ರಾವ್ ಮತ್ತು ಯು. ರಘುರಾಮು–ಇವರು ತಯಾರಿಸಿದ ಕೂಟದ ನಿಯಮಾವಳಿಯು ಸರ್ವಾನುಮತದಿಂದ ಸ್ವೀಕೃತವಾಯಿತು.

೩. "ಸಾಹಿತ್ಯಕೂಟ"ದ ನಿಯಮಾವಳಿಯಂತೆ ಪ್ರಕೃತ ವರುಷಕ್ಕೆ ಕೂಟದ ಕಾರ್ಯಕಾರಿ ಮಂಡಲಕ್ಕೆ ಅಧಿಕಾರಿಗಳ ಚುನಾವಣೆ ನಡೆದು ಈ ಕೆಳಗಿನ ಮಹನೀಯರು ಮತ್ತು ಮಹಿಳೆಯರು ಆರಿಸಲ್ಪಟ್ಟರು:

೧. ಡಾ. ರಾಘವ ರಾವ್ (ಅಧ್ಯಕ್ಷ) ೨. ಶ್ರೀ. ಎಸ್. ಕೇಶವ ರಾವ್ ಮತ್ತು ಜನಾಬ್ ಖಾದರ್(ಉಪಾಧ್ಯಕ್ಷರು) ೩. ಶ್ರೀ. ಕೆ. ಶ್ರೀಧರ ರಾವ್ ಮತ್ತು ಶ್ರೀ. ಯು. ರಘುರಾಮು (ಜತೆಕಾರ್ಯದರ್ಶಿಗಳು). ೪. ಶ್ರೀಮತಿ ಜಯವಂತಿದೇವಿ, ಕುಮಾರಿ ಮನೋರಮಾ, ಶ್ರೀ. ಸದಾನಂದ ರಾವ್, ಮಿ. ಜೆ. ಎಮ್. ಪಿಂಟೊ, ಶ್ರೀ. ಎಚ್. ಬಾಲಕೃಷ್ಣ, ಶ್ರೀ. ಬಿ. ಕೃಷ್ಣಮೂರ್ತಿ, ಶ್ರೀ. ಎಮ್. ನರಹರಿ ರಾವ್, ಶ್ರೀ. ಹರಿದಾಸಾಚಾರ್ಯ. (ಕಾರ್ಯಕಾರಿ ಮಂಡಲದ ಸದಸ್ಯರು).

೪. ಸಾಧ್ಯವಿದ್ದಷ್ಟುಮಟ್ಟಿಗೆ 'ಸಾಹಿತ್ಯಕೂಟ'ದ ಆಶ್ರಯದಲ್ಲಿ ಪ್ರತಿವಾರ ಭಾಷಣ, ಚರ್ಚೆ, ವಿಮರ್ಶಾಕೂಟ, ಇತ್ಯಾದಿ ಕಾರ್ಯಕ್ರಮಗಳನ್ನು ಕೈಕೊಳ್ಳುವಂತೆ ಈ ಸಭೆಯು ಕಾರ್ಯಕಾರಿ ಮಂಡಲವನ್ನು ಕೇಳಿಕೊಳ್ಳುತ್ತದೆ.

೩

## ವಾರ್ತಾ ಪತ್ರಿಕೆಯಿಂದ

('ಜನಮತ'ದಲ್ಲಿ)

ಇಂದುಪುರ,

ಫೆಬ್ರವರಿ ೨೪,೧೯೩೮.

ಶ್ರೀ. ಕೆ. ಶ್ರೀಧರ ರಾವ್ ಮತ್ತು ಶ್ರೀ ಯು. ರಘುರಾಮು–ಇವರ ಉತ್ಸಾಹೀ ಮುಂದಾಳುತ್ವದಲ್ಲಿ ಪ್ರಾರಂಭವಾದ 'ಸಾಹಿತ್ಯಕೂಟ'ದ ನೇತೃತ್ವದಲ್ಲಿ, ವಿದ್ಯೋದಯ ಹಾ. ಎ. ಶಾಲಾ ಭವನದಲ್ಲಿ ಶ್ರೀ. ನರಸಿಂಹಮೂರ್ತಿ, ಎಮ್. ಎ., ಬಿ. ಎಲ್–ಅವರು 'ಪ್ರಗತಿಗೆ ಮಹಿಳೆಯರ

ಕಾಣಿಕೆ' ಎಂಬ ಕುರಿತು ಪ್ರಚಂಡ ಭಾಷಣವಿತ್ತರು. ಮಹಿಳೆಯರ ಕಾರ್ಯರಂಗವೆಂದರೆ ಅಡುಗೆಕೋಣೆಯೆನ್ನುವುದು ತಪ್ಪು; ಅವರನ್ನು ಶಿಕ್ಷಿತರನ್ನಾಗಿ ಮಾಡಿ ಸಮಾಜದ ಪ್ರಗತಿಗೆ ಅವರು ನೆರವಾಗುವಂತೆ ಪುರುಷರು ಪ್ರಯತ್ನಿಸ ತಕ್ಕುದೆಂದೇ ಭಾಷಣದ ಸಾರವಾಗಿತ್ತು.

೪

ವರದಿ

ಫೆಬ್ರವರಿ ೨೭, ೧೯೩೮ರಂದು ಜರಗಿದ 'ಇಂದುಪುರ ಸಾಹಿತ್ಯಕೂಟ'ದ ಕಾರ್ಯಕಾರಿ ಮಂಡಲದ ಸಭೆಯ **ವರದಿ:—**

ಹಾಜರಿ:—ಡಾ. ರಾಘವರಾವ್, ಶ್ರೀ ಎಸ್. ಕೇಶವರಾವ್, ಶ್ರೀಮತಿ ಜಯವಂತಿ ದೇವಿ—ಇವರ ಹೊರತು ಮಿಕ್ಕ ಎಲ್ಲಾ ಸದಸ್ಯರು.

**ನಿರ್ಣಯಗಳು.** ೧. 'ಸಾಹಿತ್ಯಕೂಟಕ್ಕೆ ಕೂಡಲೇ ಆದಷ್ಟು ಮಂದಿ ಸದಸ್ಯರನ್ನು ಸೇರಿಸಿಕೊಳ್ಳುವ ಪ್ರಯತ್ನಮಾಡಬೇಕಾಗಿ ನಿರ್ಣಯಿಸಲಾಯಿತು.

೨. ಇಂದುಪುರದ ಸಾಹಿತಿಗಳ ಒಂದು ಕಥಾಸಂಗ್ರಹವನ್ನು ಬರುವ ಮೇ ತಿಂಗಳ ಅಂತ್ಯದೊಳಗೆ ಪ್ರಕಟಿಸಲು ತಕ್ಕ ಏರ್ಪಾಡುಗಳನ್ನು ಕೈಕೊಳ್ಳುವಂತೆ ಜತೆಕಾರ್ಯದರ್ಶಿಗಳಿಗೆ ಅಧಿಕಾರವೀಯಲಾಯಿತು.

೩. ಜತೆಕಾರ್ಯದರ್ಶಿಗಳು ತಯಾರಿಸಿದ ೧೯೩೮—೩೯ರ ಅಂದಾಜು ಪಟ್ಟಿಯು ಸ್ವೀಕೃತವಾಯಿತು.

೪. "ಸಾಹಿತ್ಯ ಕೂಟ"ಕ್ಕೊಂದು ಹಸ್ತಲಿಖಿತ ಪತ್ರಿಕೆಯು ಅಗತ್ಯವಿರುವ ಕಾರಣ ಶ್ರೀ. ಸದಾನಂದರಾಯ ಮತ್ತು ಕುಮಾರಿ ಮನೋರಮಾ ಇವರ ಸಂಪಾದಕತ್ವದಲ್ಲಿ "ಪ್ರಕಾಶ" ಎಂಬ ದ್ವೈಮಾಸಿಕವನ್ನು ಹೊರಡಿಸುವಂತೆಯೂ ಆ ಬಗ್ಗೆ ಖರ್ಚನ್ನು ಕೂಟದ ನಿಧಿಯಿಂದಲೇ ತೆಗೆಯುವಂತೆಯೂ ನಿರ್ಣಯಿಸಲಾಯಿತು.

೫. ನಮ್ಮ ಜಿಲ್ಲೆಯ ಸಾಹಿತ್ಯಕ್ಕಾಗಿ ಹಗಲಿರುಳು ದುಡಿಯುತಿದ್ದ ಅನೇಕ ಗ್ರಂಥಗಳ ಕರ್ತೃವಾದ ಶ್ರೀ............ರ ಅಕಾಲನಿಧನಕ್ಕಾಗಿ ಈ

ಸಭೆಯು ಸಂತಾಪಪಡುತ್ತದೆ. ಅಲ್ಲದೆ ಮೃತರ ಆತ್ಮಕ್ಕೆ ಚಿರಶಾಂತಿಯನ್ನು ಕೋರಿ ಮೃತರ ಬಂಧುಬಳಗದವರ ದುಃಖದಲ್ಲಿ ಸಹತಾಪವನ್ನು ಸೂಚಿಸುತ್ತದೆ.

೫

**ವಾರ್ತಾಪತ್ರಿಕೆಯಿಂದ**

('ಸ್ವದೇಶ ಬಂಧು'ವಿನಲ್ಲಿ)

ಇಂದುಪುರ,

ಮಾರ್ಚ್ ೩, ೧೯೩೮.

ಇಲ್ಲಿಯ 'ಸಾಹಿತ್ಯಕೂಟ'ದ ಆಶ್ರಯದಲ್ಲಿ, ವಿದ್ಯೋದಯ ಹಾ. ಎ. ಶಾಲಾ ಭವನದಲ್ಲಿ ಒಂದು ಚರ್ಚಾಸಭೆಯು ನಡೆಯಿತು. 'ಅವಿವಾಹಿತರಿಂದ ಸಮಾಜಕ್ಕೆ ಹಾನಿಯಿಡೆಯಾದ ಕಾರಣ ಎಲ್ಲಾ ಅವಿವಾಹಿತರಮೇಲೆ ತೆರಿಗೆಯೊಂದನ್ನು ಹೊರಿಸುವಂತೆ ಈ ಸಭೆಯು ಸರಕಾರವನ್ನು ಕೇಳಿಕೊಳ್ಳುತ್ತದೆ' ಎಂಬುದೇ ಚರ್ಚೆಯ ವಿಷಯವಾಗಿತ್ತು. ಸ್ವಾರಸ್ಯದ ವಿಷಯವಾದುದರಿಂದ ಊರಿನ ನೂರಾರು ಮಹನೀಯರು ಸಭೆಗೆ ಹಾಜರಿದ್ದರು. ಪುರಪ್ರಮುಖರಲ್ಲಿ ಹಲವರು ಚರ್ಚೆಯಲ್ಲಿ ಭಾಗವಹಿಸಿದ್ದರು. ಸಭಾಂತ್ಯದಲ್ಲಿ ಮತ ತೆಗೆಯಲಾಗಿ ಕೇವಲ ಒಂದೇ ಮತದಿಂದ ನಿರ್ಣಯವು ಮಂಜೂರಾಯಿತು.

೬

**ವರದಿ**

ಮಾರ್ಚ್ ೪, ೧೯೩೮ರಂದು ಜರಗಿದ 'ಸಾಹಿತ್ಯ ಕೂಟ'ದ ಕಾರ್ಯಕಾರಿ ಮಂಡಲದ ಸಭೆಯ **ವರದಿ:—**

ಹಾಜರಿ.—ಡಾ. ರಾಘವ ರಾವ್, ಶ್ರೀ. ಎಸ್. ಕೇಶವ ರಾವ್, ಶ್ರೀಮತಿ ಜಯವಂತಿ ದೇವಿ, ಮಿ. ಜೆ. ಎಸ್. ಪಿಂಟೊ ಹೊರತು ಮಿಕ್ಕ ಎಲ್ಲಾ ಸದಸ್ಯರು.

**ನಿರ್ಣಯಗಳು:** ೧. ಫೆಬ್ರವರಿ ೨೭, ೧೯೩೮ರ ನಿರ್ಣಯದಂತೆ ಕಥಾಸಂಕಲನವನ್ನು ಪ್ರಕಟಿಸಲು ರೂ. ೨೫೦ ತಗಲಬಹುದೆಂದು

ಅಂದಾಜು ಮಾಡಲಾಗಿರುವ ಕಾರಣ ಆ ಬಗ್ಗೆ ರೂ. ೨೫೦ನ್ನು ಮೀರ ದಂತೆ ಖರ್ಚು ಮಾಡುವರೆ ಕಾರ್ಯದರ್ಶಿಗಳಿಗೆ ಅಧಿಕಾರವೀಯ ಲಾಯಿತು.

೭

**ವಾರ್ತಾಪತ್ರಿಕೆಯಿಂದ**

('ಸ್ವದೇಶ ಬಂಧು' ವಿನಲ್ಲಿ)

ಇಂದುಪುರ,

ಮಾರ್ಚ ೫, ೧೯೩೮.

ಇಲ್ಲಿಯ ವಿದ್ಯೋದಯ ಹಾ. ಎ. ಶಾಲಾ ಭವನದಲ್ಲಿ ಒಂದು ಚರ್ಚಾಕೂಟವು ಜರಗಿತು. ವಕೀಲ್ ಶ್ರೀ. ಪಾಂಡುರಂಗರಾಯರು ಅಧ್ಯಕ್ಷತೆಯನ್ನು ವಹಿಸಿದ್ದರು. 'ಹಿರಿಯರು ಸಮಾಜದ ಪ್ರಗತಿ ಪಥ ದಲ್ಲಿನ ತೊಡಕುಗಳು' ಎಂಬುದೇ ಚರ್ಚೆಯ ವಿಷಯವಾಗಿತ್ತು. ಸುಮಾರು ೩ ತಾಸುಗಳ ದೀರ್ಘ ಚರ್ಚೆಯಾದ ಬಳಿಕ, ಬಹುಮತದಿಂದ ನಿರ್ಣ ಯವು ಮಂಜೂರಾಯಿತು. ಇಂದುಪುರದ ಹಲವು ವಿದ್ಯಾವಂತರು ಚರ್ಚೆಯಲ್ಲಿ ಭಾಗವಹಿಸಿದ್ದರು. 'ಸಾಹಿತ್ಯಕೂಟ'ದ ಕಾರ್ಯಕ್ರಮ ವಿದು ಸ್ತುತ್ಯ.

೮

**ರಾಜಿನಾಮೆ**

ಇಂದುಪುರ,

ಮಾರ್ಚಿ ೬, ೧೯೩೮

'ಸಾಹಿತ್ಯ ಕೂಟ'ದ ಅಧ್ಯಕ್ಷರಿಗೆ—

ಅಯ್ಯಾ,

ಹಿರಿಯರ ಕುರಿತು 'ಸಾಹಿತ್ಯ ಕೂಟ'ದವರ ಧೋರಣೆಯು ನಮಗೆ ಸರಿದೋರುವುದಿಲ್ಲವಾದ ಕಾರಣ, ಪ್ರಾಯದಲ್ಲಿ ಹಿರಿಯರಾದ ನಾವು ಕೂಟದ ಕಾರ್ಯಕಾರಿ ಮಂಡಲದಲ್ಲಿದ್ದು ಫಲವಿಲ್ಲವೆಂದು ನಮ ಗನ್ನಿಸುತ್ತದೆ. ನಮ್ಮಿಂದಾಗಿ ಕೂಟದ ಪ್ರಗತಿಗೆ ತೊಡಕಾಗದಿರಲಿ

ಎಂಬುದಾಗಿ ನಾವು ಈ ಮೂಲಕ ನಮ್ಮ ಸದಸ್ಯತ್ವಕ್ಕೆ ರಾಜಿನಾಮೆ ಕೊಟ್ಟಿದ್ದೇವೆ.

ಇತಿ,

**ಹರಿದಾಸಾಚಾರ್ಯ,**

**ಎಮ್. ನರಹರಿ ರಾವ್.**

೯

**ಆಮಂತ್ರಣ**

ಇಂದುಪುರದ 'ಸಾಹಿತ್ಯಕೂಟ'ದ ನೇತೃತ್ವದಲ್ಲಿ ಹೊರಡುವ "ಪ್ರಕಾಶ" ಹಸ್ತಲಿಖಿತ ಪತ್ರಿಕೆಯ ಉದ್ಘಾಟನೆಯು ಇದೇ ಬರುವ ತಾ. ೧೦ರಂದು ಕೂಟದ ಆಫೀಸಿನಲ್ಲಿ ಜರಗಲಿರುವುದು. ಅದೇ ಸಂದರ್ಭದಲ್ಲಿ ತಮ್ಮ ಉದ್ಯೋಗ ನಿಮಿತ್ತವಾಗಿ ಬೆಂಗಳೂರಿಗೆ ತೆರಳಲಿರುವ ಕೂಟದ ಕಾರ್ಯದರ್ಶಿ ಕೆ. ಶ್ರೀಧರ ರಾವ್, ಅವರನ್ನು ಬೀಳ್ಕೊಡುವ ಸಮಾರಂಭವೂ ಜರಗಲಿದೆ. ಕೂಟದ ಸದಸ್ಯರೆಲ್ಲರಿಗೂ ಸ್ವಾಗತವಿದೆ. ಸಂಜೆ ೬ ಗಂಟೆಗೆ ಉಪಾಹಾರ.

೧೦

**ವಿಮರ್ಶೆ**

"ಪ್ರಕಾಶ"ದ ಕುರಿತು ಅಭಿಪ್ರಾಯಗಳು:—

"...... ಬರೆಹಗಳು ಚೆನ್ನಾಗಿವೆ. ಶ್ರೀ. ಡಿ. ಪಿ.ಯವರ ಚಿತ್ರಗಳಂತೂ ಆಕರ್ಷಣೀಯವಾಗಿದ್ದು ಪತ್ರಿಕೆಗೆ ಕಳೆಗೊಟ್ಟಿವೆ.........— ಇಂದುಪುರದ ಯುವಕರ ಈ ಪ್ರಯತ್ನವು ಸ್ತುತ್ಯ."

"ಜನಮತ"

"ಇಂದುಪುರದ ಯುವಕ ಯುವತಿಯರಲ್ಲಿರುವ ಸಾಹಿತ್ಯಸೇವೆಯ ಹುರುಪು "ಪ್ರಕಾಶ"ದಲ್ಲಿ ಪ್ರಕಾಶವಾಗಿದೆ .........ಕೆಲವು ಬರೆಹಗಳು ಹಿರಿಯ ಸಾಹಿತಿಗಳ ಬರೆಹಗಳಿಗೆ ಸರಿಮಿಗಿಲೆನಿಸುತ್ತಿವೆ".

"ಸ್ವದೇಶಬಂಧು"

'............ಶ್ರೀ. ಡಿ. ಪಿ.ಯವರ ಚಿತ್ರಕಲೆಯು ಎಷ್ಟು ಕುಸುರುಗೊಂಡಿದೆಯೆಂಬುದಕ್ಕೆ ಅವರ ಮುರಲೀನಾದ, ಪೂಜಾರಿ, ಇವೇ ಸಾಕ್ಷಿ

'........ಒಂದೆರಡು ಕತೆ, ಕವನಗಳು ಬಹಳ ಉತ್ತಮವಾಗಿವೆ. ಕಿರಿಯರ ಸಾಹಸದ ಫಲವಾದ 'ಪ್ರಕಾಶ'ವು ಚಿರಕಾಲ ಬಾಳಲೆಂದು ಹಾರೈಸುತ್ತೇವೆ'.

"ಉದಯ"

೧೧

**ಪತ್ರ**

ಬೆಂಗಳೂರು,

ಮೇ ೨೦, ೧೯೩೮,

ಪ್ರಿಯ ಮಿತ್ರ ರಘುರಾಮ,

ನಾನು ಇಲ್ಲಿಗೆ ಬಂದು ಕೆಲವು ದಿನಗಳಾದುವು. ಕೆಲಸವನ್ನು ಹುಡುಕುತ್ತಾ ಇದ್ದೇನೆ. ಎಯರ್ ಫೆಕ್ಟರಿಯಲ್ಲಿ ನೌಕರಿ ಸಿಗುವ ಸಂಭವವಿದೆ. ಸಿಕ್ಕಿದೊಡನೆ ನಿಮಗೆ ಬರೆಯುತ್ತೇನೆ.

ಇಷ್ಟರಲ್ಲೇ ನನಗೆ ಇಲ್ಲಿ ಬೇಸರ ಬರತೊಡಗಿದೆ. ಇಂದುಪುರದ ನಮ್ಮ ಕಾರ್ಯಕಲಾಪಗಳನ್ನು ನೆನಪಿಗೆ ತಂದರೆ ಪುನಃ ಹಿಂದೆಹೋಗುವ ಮನಸ್ಸಾಗುತ್ತದೆ. ನಮ್ಮ 'ಸಾಹಿತ್ಯಕೂಟ'ದ ಸಭೆಗಳು ಹೇಗೆ ನಡೆಯುತ್ತವೆ? 'ಪ್ರಕಾಶ'ದ ಎರಡನೆಯ ಸಂಚಿಕೆಯು ಹೊರಬಿತ್ತೇ? ಕಥಾಸಂಗ್ರಹದ ಏರ್ಪಾಡೇನಾಯಿತು? ಹೊಸ ಉದ್ಯಮವನ್ನೇನಾದರೂ ಕೈಕೊಂಡಿರುವಿರೆ' ಎಂಬಿತ್ಯಾದಿ ವಿಷಯ ನನಗೆ ಆಗಾಗ ಬರೆಯುತ್ತಿರಬೇಕಾಗಿ ಅಪೇಕ್ಷಿಸುತ್ತೇನೆ.

ನಾನು ಕ್ಷೇಮ. ಮಿತ್ರರೆಲ್ಲರಿಗೆ ನನ್ನ ನಮಸ್ಕಾರಗಳು.

ಕೆ. ಶ್ರೀಧರ ರಾವ್.

೧೨

**ಪತ್ರ**

ಇಂದುಪುರ,

ಮೇ, ೨೫, ೧೯೩೮

ಕಾರ್ಯದರ್ಶಿ,

ಸಾಹಿತ್ಯಕೂಟ-ಅವರಿಗೆ,

ಅಯ್ಯಾ,

ನಮ್ಮ ನಿಮ್ಮೊಳಗೆ ನಡೆದ ಕರಾರಿನಂತೆ 'ಸಾಹಿತ್ಯಕೂಟ'ದ 'ಬೇವು-ಬೆಲ್ಲ' ಕಥಾ ಸಂಗ್ರಹದ ಮುದ್ರಣ ಕೆಲಸವು ಪೂರ್ಣವಾಗುತ್ತ ಬಂದಿರುತ್ತದೆ. ಆದರೆ ಆ ಬಗ್ಗೆ ನಮಗೆ ನಿಮ್ಮಿಂದ ಸಲತಕ್ಕ ರೂ. ೨೫೦ ರಲ್ಲಿ, ಮುಂಗಡವಾಗಿ ಬಂದ ರೂ. ೫೦ನ್ನು ಕಳೆದು ನಮಗೆ ರೂ. ೨೦೦ ನಿಮ್ಮಿಂದ ಸಲತಕ್ಕುದಾಗಿದೆ. ಆ ಮೊಬಲಗನ್ನು ಕೊಟ್ಟು ಪುಸ್ತಕದ ಪ್ರತಿಗಳನ್ನು ನೀವು ತ್ವರ್ಯದಲ್ಲೇ ಪಡೆಯುವಿರಾಗಿ ನಂಬಿರುತ್ತೇವೆ.

ನಮಗೆ ಸಲ್ಲತಕ್ಕ ಮೊಬಲಗನ್ನು ಕೊಟ್ಟು ಪ್ರತಿಗಳನ್ನು ಕೊಂಡು ಹೋಗುವ ತನಕ, ಅವುಗಳನ್ನು ನಮ್ಮ ವಶವೇ ಇಟ್ಟುಕೊಳ್ಳಲಾಗ್ತವುದು.

ಇತಿ ವಿಶ್ವಾಸಾರ್ಹ,

ಬಿ. ಎಸ್. ರಾವ್, ಮೆನೇಜರ್,

'ಜನಮತ' ಪ್ರೆಸ್, ಇಂದುಪುರ.

೧೩

**ವರದಿ**

ಮೇ ೨೭, ೧೯೩೮ರಂದು ಜರಗಿದ 'ಸಾಹಿತ್ಯಕೂಟ'ದ ಕಾರ್ಯಕಾರಿ ಮಂಡಲದ ಸಭೆಯ **ವರದಿ:—**

ಹಾಜರಿ:— ಶ್ರೀ. ಯು. ರಘುರಾಮ, ಶ್ರೀ. ಎಚ್. ಬಾಲಕೃಷ್ಣ, ಮಿ. ಜೆ. ಎಮ್. ಪಿಂಟೊ.

ಸಭೆಯ ನೋಟೀಸ್ ಓದಲಾಯಿತು. 'ಕೋರಂ'ಗೆ ಸಾಕಷ್ಟು ಸದಸ್ಯರಿಲ್ಲದಕಾರಣ ಸಭೆಯನ್ನು ಮೇ ೩೦, ೧೯೩೮ಕ್ಕೆ ಮುಂದುವರಿಸಲಾಯಿತು.

೧೪

**ರಾಜಿನಾಮೆ.**

ಇಂದುಪುರ;

ಮೇ ೨೮,೧೯೩೮

ಅಧ್ಯಕ್ಷ,

'ಸಾಹಿತ್ಯಕೂಟ'- ಅವರಿಗೆ.

ಅಯ್ಯಾ,

ಕಾರ್ಯಬಾಹುಲ್ಯದಿಂದ ನನಗೆ 'ಸಾಹಿತ್ಯಕೂಟ'ದ ಸೇವೆಮಾಡಲು ಏನೊಂದು ಬಿಡುವು ದೊರೆಯದ ಕಾರಣ, "ಪ್ರಕಾಶ"ದ ಸಂಪಾದಕತ್ವ ಮತ್ತು ಕಾರ್ಯಕಾರಿ ಮಂಡಲದ ಸದಸ್ಯತ್ವಕ್ಕೆ ನಾನು ಈ ಮೂಲಕ ರಾಜಿನಾಮೆಯಿತ್ತಿರುತ್ತೇನೆ. 'ಸಾಹಿತ್ಯಕೂಟ'ದಿಂದ ನನಗೆ ಇಷ್ಟರ ತನಕ ದೊರೆತ ಪ್ರೋತ್ಸಾಹಕ್ಕಾಗಿ ನಾನು ಅವರಿಗೆ ತುಂಬಾ ಆಭಾರಿಯಾಗಿದ್ದೇನೆ.

ಇತಿ,

**ಸದಾನಂದರಾಯ.**

೧೫

**ವರದಿ**

ಮೇ ೩೦, ೧೯೩೮ರಂದು ಜರಗಿದ "ಸಾಹಿತ್ಯಕೂಟ"ದ ಕಾರ್ಯಕಾರಿ ಮಂಡಲದ ಮುಂದುವರಿಸಲ್ಪಟ್ಟ ಸಭೆಯ **ವರದಿ:—**

ಹಾಜರಿ: ಶ್ರೀ. ಯು. ರಘುರಾಮ, ಶ್ರೀ. ಎಚ್. ಬಾಲಕೃಷ್ಣ, ಮಿ. ಜೆ. ಎಮ್. ಪಿಂಟೋ, ಶ್ರೀ. ಬಿ. ಕೃಷ್ಣಮೂರ್ತಿ, ಜನಾಬ್ ಕೆ. ಎ. ಖಾದರ್.

೧. ತಾ. .. ರ ಶ್ರೀ ಹರಿದಾಸಾಚಾರ್ಯ, ಶ್ರೀ. ಎಮ್. ನರಹರಿ ರಾವ್ ಇವರ ಹಾಗೂ ತಾ.....ರ ಶ್ರೀ. ಸದಾನಂದ ರಾಯರ ರಾಜಿನಾಮೆಯ ಪತ್ರಗಳನ್ನು ಓದಿ ವಿಷಾದದಿಂದ ಅವುಗಳನ್ನು ಸ್ವೀಕರಿಸಲಾಯಿತು.

೨. ಮೇ ೨೫, ೧೯೩೮ರಂದು ಮೆನೇಜರ್, "ಜನಮತ"ಪ್ರೆಸ್— ಇವರಿಂದ ಕಾರ್ಯದರ್ಶಿಯವರಿಗೆ ಬಂದ ಪತ್ರವನ್ನು ಓದಲಾಯಿತು.

**ನಿರ್ಣಯ:** ವರ್ಗಣಿ, ಧನಸಹಾಯ ಇತ್ಯಾದಿಗಳಿಂದ ಕೂಟಕ್ಕೆ ದೊರೆತ ಹಣವೆಲ್ಲ ಇಷ್ಟರಲ್ಲೇ ವ್ಯಯವಾಗಿ ಹೋದ ಕಾರಣ, ಸಾಕಷ್ಟು ಹಣ ದೊರೆಯುವ ತನಕ "ಬೇವು-ಬೆಲ್ಲ"ದ ಪ್ರತಿಗಳನ್ನು "ಜನಮತ"

ಪ್ರೆಸ್ಸಿನಲ್ಲಿಯೇ ಇಟ್ಟುಕೊಳ್ಳುವಂತೆಯೂ ತಾವು ಮುಂಗಡವಾಗಿ ಕೊಟ್ಟ ರೂ. ೫೦ರ ಮಟ್ಟಿಗೆ ೨೫ ಪ್ರತಿಗಳನ್ನಾದರೂ ಕೂಟಕ್ಕೆ ಕೊಡಿಸುವಂತೆಯೂ "ಜನಮತ" ಪ್ರೆಸ್ಸಿನ ಮೆನೇಜರರೊಡನೆ ಈ ಸಭೆಯು ಕೇಳಿಕೊಳ್ಳುತ್ತದೆ.

೧೬

**ರಾಜಿನಾಮೆ**

ಇಂದುಪುರ

ಜೂನ್ ೫, ೧೯೩೮.

ಅಧ್ಯಕ್ಷ,
ಸಾಹಿತ್ಯಕೂಟ–ಅವರಿಗೆ,

ಆಯ್ಯಾ,

ನಾನು "ಸಾಹಿತ್ಯಕೂಟ"ದ ಕಾರ್ಯಕಾರಿ ಮಂಡಲದಲ್ಲಿದ್ದು ಸೇವೆ ಸಲ್ಲಿಸುವ ಯಾವ ದಾರಿಯೂ ನನಗೆ ತೋರದ ಕಾರಣ ನನ್ನ ಸದಸ್ಯತನಕ್ಕೆ ಈ ಮೂಲಕ ರಾಜಿನಾಮೆ ಕೊಡಲಿಚ್ಛಿಸುತ್ತೇನೆ. ರಾಜಿನಾಮೆಯು ಸ್ವೀಕೃತವಾಗುವುದೆಂದು ನಂಬುತ್ತೇನೆ.

ಇತಿ,

ಕುಮಾರಿ ಮನೋರಮ.

೧೭

**ಪತ್ರ**

ಬೆಂಗಳೂರು,

ಜೂನ್ ೧೫, ೧೯೩೮.

ಪ್ರಿಯಮಿತ್ರ ರಘುರಾಮ,

ಹೇಗೂ ನನಗೊಂದು ಕೆಲಸ ಸಿಕ್ಕಿದಂತಾಯಿತು. ಮೊದಲೇ ಎಣಿಸಿದಂತೆ ಹಿಂದುಸ್ತಾನ ಏಯರ್ ಫೆಕ್ಟರಿಯಲ್ಲಿ ಉದ್ಯೋಗ. ತಿಂಗಳಿಗೆ ರೂ. ೭೦ ಸಿಗುತ್ತದೆ. ಮಲ್ಲೇಶ್ವರದಲ್ಲಿ ಉಳಕೊಳ್ಳಲು ಒಂದು ರೂಮ್

ಮಾಡಿಕೊಂಡಿದ್ದೇನೆ. ಸದ್ಯಕ್ಕೆ ಹೋಟಲಲ್ಲಿಯೇ ಊಟದ ವ್ಯವಸ್ಥೆ ಮಾಡಬೇಕಾಗಿದೆ.

ನಾನು ಈಚೆಗೆ ಬಂದೆನೆಂದು ನೀವು ಬೇಸರಪಡುವುದು ಬೇಡ. ನೀವೊಬ್ಬರೇ "ಸಾಹಿತ್ಯಕೂಟ"ದ ಎಲ್ಲಾ ಕೆಲಸವನ್ನು ನಿರ್ವಹಿಸುವಷ್ಟು ಚತುರರಿದ್ದೀರೆಂದು ನಾನು ಬಲ್ಲೆ. ನಾನು ಸುಮ್ಮಗೆ ನಿಮ್ಮನ್ನು ಹೊಗಳುತ್ತಿದ್ದೇನೆಂದು ತಿಳಿಯಬೇಡಿ. ಒಬ್ಬಿಬ್ಬರು ಗೆಳೆಯರ ಸಹಾಯ ದೊರೆತರೆ, ಕಾರ್ಯಕಾರಿ ಮಂಡಲವಿಲ್ಲದೇನೆ ನಿಮ್ಮ ಕೆಲಸವನ್ನು ಮುಂದೊತ್ತಬಹುದು.

ಡಾ. ರಾಘವ ರಾಯರು ಮೊದಲನೆಯ ಸಭೆಗೆ ಬಂದಿದ್ದರಲ್ಲವೆ ಮತ್ತಿನ ಸಭೆಗಳಿಗೆ ಬರುವುದು? ಅವರು ಯಾವ ಸಭೆಗೂ ಬರಲಾರರೆಂದು ನನಗೆ ಮೊದಲೇ ಗೊತ್ತಿತ್ತು. ಆದರೂ ಕೂಟಕ್ಕೊಂದು ಮನ್ನಣೆ ಸಿಗಬೇಕಾದರೆ, ಅಂತಹ ಮಹತೋಭಾರ ಮನುಷ್ಯರು ಅದರಲ್ಲಿರಬೇಕೆಂಬುದಕ್ಕಾಗಿಯೇ ನಾನು ಆ ದಿನ ಅವರ ಹೆಸರನ್ನು ಸೂಚಿಸಿದುದಾಗಿದೆ. ಅವರು ತಮ್ಮ ಹೆಸರನ್ನು ದಾನಮಾಡಲು ಒಪ್ಪಿದುದೇ ನಮ್ಮ ಪುಣ್ಯವಷ್ಟೆ! ಸಭೆಗೆ ಬಂದು ಅವರು ಮಾಡತಕ್ಕುದಾದರೂ ಏನಿದೆ? ಆದುದರಿಂದ ಅವರು ಬಾರದಿರುವುದಕ್ಕಾಗಿ ನೀವು ಬೇಸರಿಸುವುದು ಬೇಡ.

'ಪ್ರಕಾಶ'ವು ಮೊದಲನೆಯ ಸಂಚಿಕೆಯಲ್ಲೇ ಮೃತಿಹೊಂದಿತೆಂದು ಕೇಳಿ ಬಹಳ ವಿಷಾದ ಪಡುತ್ತೇನೆ. ಶ್ರೀ ಸದಾನಂದ ರಾಯರು ಮತ್ತು ಕುಮಾರಿ ಮನೋರಮಾ ಅಷ್ಟು ಸಂಕುಚಿತ ಮನೋವೃತ್ತಿಯವರೆಂದು ನಾನು ತಿಳಿದಿರಲಿಲ್ಲ. ಮನೋರಮೆಯ 'ಜೀವನ ಯಂತ್ರ' ಮತ್ತು ಸದಾನಂದ ರಾಯರ 'ಚೇಳು' ಇವೆರಡೂ ಕತೆಗಳನ್ನು ನಾನು ಓದಿದ್ದೇನೆ. 'ಬೇವು–ಬೆಲ್ಲ'ದಲ್ಲಿ ಅವೆರಡನ್ನೂ ಸೇರಿಸದಿದ್ದುದು ಒಳ್ಳೆಯದೇ ಆಯಿತು. ಆದರೆ ಅದಕ್ಕೋಸ್ಕರವೇ ಅವರಿಬ್ಬರೂ ಕೂಟದ ಹೊರಗಾದುದು ಶೋಚನೀಯ. ಹಾಗೆಯೇ ಬರೀ ವಿನೋದಕ್ಕಾಗಿ ಜರಗಿಸಿದ ಚರ್ಚೆಯಲ್ಲಿ ಸೋತ ಬಗ್ಗೆ ಆಚಾರ್ಯರು ಮತ್ತು ನರಹರಿರಾಯರು ರಾಜಿನಾಮೆಯಿತ್ತುದೂ ಆಶ್ಚರ್ಯವಷ್ಟೆ! ಇಂತಹ ಸಂಕುಚಿತ ಮನಸ್ಸಿನ, ದುರಭಿ

ಮಾನಿಗಳ ನಡುವೆ ಎಂತಹ ಸಾಹಿತ್ಯ ಸೇವೆಯೂ ಕಷ್ಟಸಾಧ್ಯವೆಂಬುದರಲ್ಲಿ ಸಂದೇಹವಿಲ್ಲ.

'ಬೇವು—ಬೆಲ್ಲ'ದ ಒಂದು ಪ್ರತಿ ನನಗೆ ಸಿಗಬಹುದೇ?

ಸಾಹಿತ್ಯಕೂಟದ ಶ್ರೇಯಃಕಾಂಕ್ಷಿ.

**ಕೆ. ಶ್ರೀಧರ ರಾವ್**

೧೮

**ವಿಮರ್ಶೆ**

'ಬೇವು–ಬೆಲ್ಲ' ಕಥಾಸಂಗ್ರಹದ ಕುರಿತು ಕೆಲವು ಅಭಿಪ್ರಾಯಗಳು:

'ಇಂದುಪುರ ಸಾಹಿತ್ಯಕೂಟ ದ ಮೊದಲನೆಯ ಪ್ರಕಟಣೆ. ಕ್ರೌನ್ ೧|೮ನೆಯ ಆಕಾರದ ೧೦೮ ಪುಟಗಳು. ಬೆಲೆ. ೧ರೂ.

ಇದರಲ್ಲಿ ಇಂದುಪುರದ ಉತ್ಸಾಹೀ ತರುಣ ಸಾಹಿತಿಗಳ ೧೨ ಕತೆಗಳು ಅಡಕವಾಗಿವೆ. ಕತೆಗಳು ಸೊಗಸಾಗಿವೆ. ಪ್ರತಿಯೊಂದು ಕತೆಯ ನಿರೂಪಣೆಯಲ್ಲಿ ಸಹಜತೆಯಿದೆ, ಹಾಗೂ ಒಂದು ಆದರ್ಶವಿದೆ. ಶ್ರೀ........ಯವರ 'ನನ್ನ ಪಾಡು' ಶ್ರೀ........ರ 'ಕ್ರಾಸ್‌ವರ್ಡ್' ಶ್ರೀಮತಿ........ರ 'ಅವಳ ದೇವರು' ಇವು ಸಂಗ್ರಹದಲ್ಲಿನ ಅತಿ ಉತ್ತಮ ಕೃತಿಗಳೆಂದು ಹೇಳಬಹುದು. ಸಂಗ್ರಹವು ಜನಪ್ರಿಯವಾಗಬೇಕೆಂದು ಪುಟಗಳ ಸಂಖ್ಯೆ ೧೦೮ ಇದ್ದರೂ ಬೆಲೆ ಒಂದೇ ರೂಪಾಯಿ ಇಡಲಾಗಿದೆ. ತರುಣ ಸಾಹಿತಿಗಳ ಸಾಹಸವು ಸ್ತುತ್ಯ. ಇಂತಹ ಹಲವು ಗ್ರಂಥಗಳು 'ಸಾಹಿತ್ಯಕೂಟ'ದವರಿಂದ ಪ್ರಕಟವಾಗಲೆಂದು ಆಶಿಸುತ್ತೇವೆ.

"ಜನಮತ" ಇಂದುಪುರ.

'........ಸಾಹಿತ್ಯಕೂಟದ ಪ್ರಥಮ ಕುಸುಮ. ಇದನ್ನು ಪ್ರಕಟಿಸಿದ ತರುಣರ ಉತ್ಸಾಹವು ಪ್ರಶಂಸನೀಯವಾದರೂ ಉತ್ಸಾಹದ ಫಲವು ಹಾಗಿಲ್ಲವೆಂದು ವಿಷಾದಪಡುತ್ತೇವೆ........ಕತೆಗಳಲ್ಲಿ ಕೆಲವು ತೀರಾ ಹೊಸಬರು ಬರೆದ ಕತೆಗಳಂತಿವೆ........ಭಾಷೆಯಲ್ಲಿ, ಅಲ್ಲಲ್ಲಿ ಇಂಗ್ಲೀಷ್ ನುಡಿಗಟ್ಟಿನ ಛಾಯೆ ಮೂಡಿದೆ........'ಪ್ರಾಣಸಖ' 'ಕ್ರಾಸ್‌ವರ್ಡ್' 'ಓಣಿಯಲ್ಲಿ'... ....ಈ ಮೂರು ಕತೆಗಳನ್ನು ಸೇರಿಸದಿದ್ದರೆ ಸಂಗ್ರಹದ

ಬೆಲೆ ಏರುತಿತ್ತೆಂಬುದರಲ್ಲಿ ಸಂದೇಹವಿಲ್ಲ....ತರುಣರ ಎರಡನೆಯ ಪ್ರಕಟಣೆಯಾದರೂ ಇದಕ್ಕಿಂತ ತುಂಬಾ ಯಶಸ್ವಿಯಾಗಲೆಂದು ಹಾರೈಸುತ್ತೇವೆ".

"ಸ್ವದೇಶಬಂಧು" ಬೆಂಗಳೂರು.

'...............ಇದ್ದ ಕಥಾಸಂಗ್ರಹಗಳಿಗೇನೆ ಹೇಳಕೇಳುವವರಿಲ್ಲ. ಇಂದುಪುರದ 'ಸಾಹಿತ್ಯಕೂಟ'ದ ತರುಣರು ಈಯೊಂದು ಸಂಗ್ರಹವನ್ನು ಹೊರಡಿಸಿದ್ದಾರೆ. ಕತೆಗಳನ್ನು ಓದಿದಾಗ, ಕಾಗದ ಬರಗಾಲದ ಈ ದುರ್ದಿನಗಳಲ್ಲಿ ಪ್ರಕಟವಾಗಲಿರುವ ಪ್ರತಿಯೊಂದು ಗ್ರಂಥವನ್ನು ಮುಂದಾಗಿಯೇ ವಿಮರ್ಶಿಸಿ, ಪ್ರಕಟಿಸಲು ಯೋಗ್ಯವಾದವುಗಳನ್ನು ಮಾತ್ರ ಹೊರಡಿಸುವಂತೆ ಅನುಮತಿ ಕೊಡಲು ಒಂದು ಸಮಿತಿಯನ್ನು ಏರ್ಪಡಿಸುವುದು ಉಚಿತವೆಂದು ನಮಗನ್ನಿಸುತ್ತದೆ...........ಕತೆಗಳಲ್ಲಿ ಕೆಲವೆಡೆ ಅಶ್ಲೀಲತೆಯು ಒಡೆದು ಕಾಣುತ್ತದೆ...........ಒಟ್ಟಿಗೆ ಹೇಳುವುದಾದರೆ ಸಂಗ್ರಹವು ಸಂಗ್ರಹಿಸಲು ಯೋಗ್ಯವೆಂದು ನಾವು ಹೇಳುವಂತಿಲ್ಲ.'

'ನಿಷ್ಪಕ್ಷಪಾತಿ, ಬೆಂಗಳೂರು

೧೯

ಪತ್ರ.

ಬೆಂಗಳೂರು,

ಜೂನ್ ೨೭,೧೯೩೮.

ಪ್ರಿಯಮಿತ್ರ ರಘುರಾಮ,

'ಬೇವು-ಬೆಲ್ಲ'ದ ಪ್ರತಿ, ಅದರ ಕುರಿತು ಪ್ರಕಟವಾದ ಅಭಿಪ್ರಾಯಗಳು, ಹಾಗೂ ನಿಮ್ಮ ಪತ್ರವು ತಲ್ಪಿತು. ಎಷ್ಟೇ ಎಡರು ತೊಡರುಗಳಿದ್ದರೂ 'ಸಂಗ್ರಹ'ವನ್ನು ಪ್ರಕಟಿಸಲು ನಿಮಗೆ ಸಾಧ್ಯವಾದುದಕ್ಕಾಗಿ ನಾನು ನಿಮ್ಮನ್ನು ಅಭಿನಂದಿಸುತ್ತೇನೆ.

'ಬೇವು-ಬೆಲ್ಲ'ದ ವಿಮರ್ಶೆಗಳನ್ನು ತಿಳಿದು ನೀವು ಚಿಂತಿಸುವುದು ಬೇಡ. ಇಂದಿನ ಸಾಹಿತಿಗಳ ಧೋರಣೆಯೇ ಹಾಗಾಗಿ ಬಿಟ್ಟಿದೆ. ಕೃತಿಗಳಲ್ಲಿರುವ ಒಳಿತನ್ನು ತೋರಿಸಿ, ಪ್ರೋತ್ಸಾಹಿಸುವವರೇ ಕಡಮೆ.

ಅವುಗಳಲ್ಲಿರುವ ಹುಳುಕುಗಳನ್ನೆತ್ತಿ ಗ್ರಂಥಕರ್ತರನ್ನು ದೂರುವವರೇ ಹೆಚ್ಚು.

'ಸಾಹಿತ್ಯಕೂಟ'ದ ಇತ್ತೀಚೆಗಿನ ಕಾರ್ಯಕಲಾಪಗಳನ್ನು ಕೇಳಿ ನನಗೆ ತುಂಬಾ ಪಶ್ಚಾತ್ತಾಪವಾಗುತ್ತಿದೆ. ಯಾವ ಸಭೆಗೂ 'ಕೋರಂ' ಇಲ್ಲದಿದ್ದರೆ ಕೂಟವನ್ನು ನಡೆಯಿಸುವುದಾದರೂ ಹೇಗೆ? ನಾಲ್ಕೇ ತಿಂಗಳಲ್ಲಿ ಕೂಟದ ಸ್ಥಿತಿ ಹೀಗಾದುದನ್ನು ಕಂಡರೆ, ಪರಕೀಯರು ನಮ್ಮನ್ನು ಆರಂಭ ಶೂರರೆನ್ನುವುದರಲ್ಲಿ ತಪ್ಪೇನಿದೆ?

ನೀವಾದರೂ ಕೂಟದ ಅಭಿವೃದ್ಧಿಯನ್ನು ಸಾಧಿಸುವಿರೆಂದು ನಂಬಿದ

ಕೆ. ಶ್ರೀಧರ ರಾವ್.

೨೦

೫

# ವಿಜಯ

ಅಂದು ಭಾನುವಾರವಾಗಿತ್ತು. ಇಸ್ಪೀಟ್ ಆಟದ ಭರದಲ್ಲಿ ಯಾರ ಕಣ್ಣೂ ಗಡಿಯಾರದತ್ತ ಹೋಗಿರಲಿಲ್ಲ. ಆದ ಕಾರಣ ಕ್ಲಬ್ಬಿನಿಂದ ಹೊರಟು, ಮನೆ ಸೇರುವಾಗ ಹೊತ್ತು ನೆತ್ತಿಗೇರಿತ್ತು. ಬಂದವನೇ ರೂಮಿನೊಳಗೆ ಹೋಗಿ, ಕೋಟು ತೆಗೆದಿಟ್ಟೆ. ಆದರೂ ಮನೆಯಲ್ಲಿ ಯಾರೂ ಇದ್ದಂತೆ ತೋರಲಿಲ್ಲ. ಅಷ್ಟು ಮೌನವಾಗಿತ್ತು ಮನೆಯ ವಾತಾವರಣ.

'ಜಯೆಯು ಇನ್ನೂ ಅಡುಗೆಕೋಣೆಯಲ್ಲೇ ಇದ್ದಾಳೆ. ಏನಿದು? ನಾನು ಈ ಹೊತ್ತು ತಡವಾಗಿ ಬರುವೆನೆಂದು ಈಕೆಗೆ ಕನಸುಬಿದ್ದಿತ್ತೆ? ಇಲ್ಲವಾದರೆ—ಯಾವಾಗಲೂ ನನ್ನ ಆಗಮನವನ್ನು ನಿರೀಕ್ಷಿಸುತ್ತ ನಿಲ್ಲುತ್ತಿದ್ದ ಜಯಾ ಇಂದು ಒಳಗೇ ಏಕೆ ಕುಳಿತಿರಬೇಕು? ಸ್ವಲ್ಪ ಮೋಜು ಮಾಡೋಣ' ಎಂದು ನಾನಂದುಕೊಂಡೆ.

"ಜಯಮ್ಮಾ!" ಎಂದೆ.

"ಯಾರದು"? ಆಕೆ ಕೇಳಿದಳು.

ನನಗೆ ತಮಾಷೆಯು ಉಕ್ಕಿ ಬಂತು. ನಾನು ಬಂದುದು ಆಕೆಗೆ ತಿಳಿದಿಲ್ಲವೆಂಬುದು ಖಂಡಿತವಾಯಿತು.

"ಅಮ್ಮಾ, ರಾಯರಿದ್ದಾರೆಯೇ ಮನೆಯಲ್ಲಿ?"—ಸ್ವಲ್ಪ ಸ್ವರ ಬದಲಾಯಿಸಿ ನಾನು ಮರುತ್ತರ ಕೊಟ್ಟೆ.

"ಪೇಟೆಗೆ ಹೋಗಿದ್ದಾರೆ. ಯಾರದು?....ಏನು ಕೆಲಸ?" ಎನ್ನುತ್ತಾ ಆಕೆ ಹೊರಗೆಬಂದಳು. ನನ್ನನ್ನು ಕಂಡಾಕ್ಷಣ ಮುಖ ತಿರುಗಿಸಿ "ಇಸ್ಸಿ

ಯಪ್ಪ ಹುಡುಗಾಟಿಕೆಯೆ?" ಎಂದು ಹುಸಿ ಮುನಿಸಿನಿಂದ ಆಕೆ ಹಿಂದೆ ಸರಿದಳು.

"ಜಯಾ! ಇಲ್ಲಿಗೆ ಬರಲಾರೆಯಾ?"

"ಯಾಕೊ–ಒಳಗೆ ತುಂಬಾ ಕೆಲಸ ಉಳಿದಿದೆ".

"ಕೆಲಸವೇನೇ ಇರಲಿ; ಮೊದಲೊಮ್ಮೆ ಇತ್ತ ಬಾ".

'ಹೊತ್ತು ಹನ್ನೆರಡಾಯಿತು ಬೇಳೆಯಿನ್ನೂ ಸರಿಯಾಗಿಬೇಯಲಿಲ್ಲ'

"ಅದೇನು! ನಾನು ಈ ಹೊತ್ತು ತಡವಾಗಿ ಬರುವೆನೆಂದು ಬೇಳೆಗೆ ಯಾರು ಹೇಳಿದರು?

"ಯಾರೇಕೆ ಹೇಳುತ್ತಾರೆ. ನಮ್ಮ ದೇವರ ಗುಟ್ಟು ನಮಗೆ ಗೊತ್ತಿಲ್ಲದಿದ್ದರಲ್ಲವೆ!"

"ಹೋಗಲಿ, ಇಲ್ಲಿಗೆ ಬಾ; ಒಂದು ಏಕಾಂತವಿದೆ."

"ಏನು ಏಕಾಂತ?"

"ಬಂದರೆ ಮಾತ್ರ ಹೇಳುತ್ತೇನೆ".

"ಕೆಲಸದ ನಡುವೆ ನಿಮ್ಮದೊಂದು ಅವಾಂತರ"

'ಅವಾಂತರ ಗಿವಾಂತರ ನಾನರಿಯೆ-ನಿನಗೇ ಲಾಭ-ಬೇಕಾದರೆ ಬಾ'

"ಅಲ್ಲೇ ಹೇಳಿಬಿಡಿ......ಅಂತೂ ಊಟ ಬೇಗವಾಗುವಂತಿಲ್ಲ. ಬೇಗ ಹೇಳಿ" ಎಂದು ಹೇಳುತ್ತ ಮುಂದೆ ಬಂದು ಅರೆಜಾರಿದ ಸೀರೆಯೊಳಗಿನ ತನ್ನ ದೇಹ ಸೌಂದರ್ಯವನ್ನು ಬೀರ ತೊಡಗಿದಳು.

"ಹತ್ತಿರ ಬರುವುದಿಲ್ಲವೇ"

"ಊಹು!"

"ಹಾಗಾದರೆ ನಡಿ"

ಆಕೆ ಹೊರಡಲನುವಾದಳು-

"ಜಯಾ–ಬಾ ಎಂದರೆ"

"ಊಹು"

"ಇಗೋ ಬೇಕೋ ಬೇಡ!"

ಜಿಂಕೆಯ ಮರಿಯಂತೆ ನೆಗೆದು ಬಂತು ಆಕೆಯ ಸವಾರಿ.

"ಏನು ಏನು ಏನು ತಂದಿದ್ದೀರಿ!"

'ನೋಡು ನೀನು ಮೊನ್ನೆ ಹೇಳಿದ್ದು ....ಝೂಲಾ'

'ಸೀರೆಯೋ·'

'ಹುಂ'

'ಕೊಡಿ ಮತ್ತೆ'

'ಬಾ ಒಳಗೆ!' ಜಯಾ ಒಳಗೆ ಬಂದು ಅಲ್ಲೇ ಕುರ್ಚಿಯ ಮೇಲೆ ಕುಳಿತುಕೊಂಡಳು.

'ಹಾಂ ಅಲ್ಲೇ ಮೇಜಿನ ಮೇಲಿದೆ ನೋಡು'.

'ಗಾಬರಿಯಿಲ್ಲ'.

ಆಕೆ ಸೀರೆಯನ್ನು ಹುಡುಕಲುದ್ಯುಕ್ತಳಾದಳು. ನಾನು ಮೆಲ್ಲನೆ ಹಿಂದಿನಿಂದ ಬಂದು ಆಕೆಯ ಕೈ ಹಿಡಿದೆ.

'ಥೂ ಬಿಡಿ ಎಂದರೆ ಸೀರೆಯೆಲ್ಲಿ?'

'ಸೀರೆಯೂ ಇಲ್ಲ; ಗೀರೆಯೂ ಇಲ್ಲ. ಬರಲೊಪ್ಪದವಳನ್ನು ತರಿಸಲಿಕ್ಕೆ ಇಷ್ಟೆಲ್ಲಾ ಉಪಾಯ –ತಿಳಿಯಿತೆ?'

ಜಯೆಯ ಮುಖ ಸಾಸಿವೆಯಷ್ಟು ಸಣ್ಣದಾಯಿತು. ಆಕೆ ಸಿಟ್ಟಾದವಳಂತೆ ಒಳಗೆ ಹೋದಳು.

ಅರೆತಾಸು ಕಳೆದ ಬಳಿಕ ನಾನೂ ಒಳಗೆ ಹೋದೆ. ನಾನೇ ಎಲೆ ಹಾಕಿಕೊಂಡೆ. ಜಯಾ ನನ್ನ ಮೇಲೆ ಸಿಟ್ಟಾಗಿದ್ದಳು. ಅನ್ನ ಸರಿಯಾಗಿ ಬೆಂದಿರಲಿಲ್ಲ. ಸಾರಿಗೆ ಉಪ್ಪಿತ್ತೋ ಇಲ್ಲವೋ? ಬಡಿಸುವಾಗ ಚರಿಗೆ–ಸೌಟುಗಳ ಗಡಬಡ ಸದ್ದು ಆಕೆಯ ಸಿಟ್ಟನ್ನು ಹೊರ ಹಾಕುತ್ತಿತ್ತು. ಅಂತೂ ಚಾಚೂ ಮಾಶೆತ್ತದೆ, ನಾನು ಊಟ ಮುಗಿಸಿ ಹೊರ ಬರಬೇಕಾಯಿತು.

ಂಂ ಂಂ ಂಂ

ಅಂದು ಪ್ರಭಾತ್ ಫಿಲ್ಮ್ ಕಂಪೆನಿಯವರ "ಆದ್ಮಿ" ನಮ್ಮೂರಿಗೆ ಬಂದಿತ್ತು. 'ಎರಡೇ ದಿನಗಳ ಮಟ್ಟಿಗೆ' ಎಂದು ಮ್ಯಾನೇಜರು ಮೊದಲೇ ಸೂಚನೆ ಕೊಟ್ಟಿದ್ದರು. 'ಈ ಹೊತ್ತು ನೋಡಿದ್ದೇ ಬಂತು.' ಎಂದು ಎರಡು ಟಿಕೇಟ್ ರಿಝರ್ವ್ ಮಾಡಿಸಿ ಮನೆಗೆ ಬಂದಿದ್ದೆ ನಾನು. ಊಟ ಮುಗಿದ ಬಳಿಕಃ—

'ಜಯಾ ಸಿನಿಮಾಕ್ಕೆ ಹೋಗೋಣವೇ! ಪ್ರಭಾತ್‌ನವರ ಆದ್ಮಿ ಯಂತೆ—ಶಾಂತಾ ಹುಬ್ಳೀಕರ್. ನಿನ್ನ ಹಾಗೆಯೇ ಇದ್ದಾಳೆ' ಎಂದೆ

"ಇಲ್ಲ, ನಾನು ಬರುವುದಿಲ್ಲ."

"ಬೇಡವಾದರೆ ಸುಮ್ಮನಿರು. ನಿನ್ನ ಅಹಂಕಾರಕ್ಕೆ ನಾನು ಹೆದರುವೆನೇ? ನಾನೇ ಎರಡು ಬಾರಿ ನೋಡುತ್ತೇನೆ.'

'ಅಗತ್ಯವಾಗಿಯೂ ನೋಡಬೇಕು. ನನ್ನೊಡನೆ ಆ ಬಡಾಯಿ ಯೇಕೆ?'

ನಾನು ಆ ರಾತ್ರಿ ಸಿನಿಮಾದ ಕಡೆಗೆ ಹೊರಟೆ.

೦೦ ೦೦ ೦೦

ಸಿನಿಮಾ ರಾತ್ರಿ ಹನ್ನೆರಡುವರೆಯ ತನಕ ಮುಂಬರಿಯಿತು. ಶುಕ್ಲ ಪಕ್ಷವಾಗಿದ್ದರೂ ಹೊರಗೆ ತಿಂಗಳು ಬೆಳಕಿರಲಿಲ್ಲ. ಬಾನೆಲ್ಲ ಮೋಡಗಳಿಂದ ಮುಸುಕಿತ್ತು. ಮಳೆಯೂ ಹನಿಹನಿಯಾಗಿ ಬೀಳಲಾರಂಭಿಸಿತ್ತು. ನಾನು ಸಿನಿಮಾ ನೋಡುವುದರಲ್ಲೇ ಲೀನನಾಗಿದ್ದೆ. ಶಾಂತಾ, ಸಾಹು ಮೋದಕ—ಇವರ ಚಿತ್ತಾಕರ್ಷ ಅಭಿನಯವು ಬಗೆಮುಟ್ಟುವಂತಿತ್ತು. ನನಗೂ 'ಪ್ರೇಮಿಾ ಪ್ರೇಮ ನಗರಮೇ ಜಾಯೇ' ಎಂದು ಹಾಡುವ ಉತ್ಸಾಹವಿತ್ತು. ಜಯಾ ಬಂದಿದ್ದರೆ ಈ ಹಾಡನ್ನು ಎಷ್ಟು ಸುಮಧುರವಾಗಿ ಹಾಡುತ್ತಿದ್ದಳು ಎಂದು ಯೋಚಿಸತೊಡಗಿದೆ. ಸಿನಿಮಾ ಮುಗಿದೊಡನೆ 'ಟಾಂಗಾ' ಮಾಡಿಸಿ ಮನೆಗೆ ಹೋದೆ. ಮನೆ ಮುಟ್ಟಿದಾಗ ಆಕೆ ಎಚ್ಚರಿರಲಿಲ್ಲವೆಂದು ತೋರುತ್ತೆ. ರಾಮುವು ಬಾಗಿಲು ತೆರೆದುದರಿಂದ, ಹೆಚ್ಚು ಹೊತ್ತು ನಾನು ಹೊರಗೆ ನಿಲ್ಲಲಿಲ್ಲ. ಮನೆಯೊಳಗೆ ಬಂದು ಕಾಲು ತೊಳೆದು ಮಲಗುವ ಕೋಣೆಗೆ ಹೋಗಿ, ಹಾಸಿಗೆ ಬಿಡಿಸಿ ಮಲಗಿಕೊಂಡೆ.

ಕಣ್ಣೆವೆ ಮುಚ್ಚುತ್ತಿವೆಯೆನ್ನುವಷ್ಟರಲ್ಲಿ ರಾಮುವು ಬಂದು ನನ್ನನ್ನು ಎಬ್ಬಿಸಿದ. 'ಏನು! ವಿಶೇಷವೇನು!' ಎಂದು ನಾನು ಪ್ರಶ್ನಿಸಿದೆ.

"ಅಕ್ಕನಿಗೆ ಜ್ವರ, ಹೊಟ್ಟೆನೋವು ಬಲವಾಗಿದೆ"ಯೆಂದ.

ನಾನು ದಿಗಿಲುಗೊಂಡೆ. 'ಹಿಂದಿನ ದಿನ ವೃಥಾ ಆಕೆಯ ಮನ

ನೋಯಿಸಿದುದು ತಪ್ಪಾಯಿತು. – ಅದರ ಪರಿಣಾಮವಾಗಿರಬೇಕು' ಎಂದುಕೊಂಡೆ.

ಜಯೆಯಿದ್ದಲ್ಲಿಗೆ ಹೋಗಿ ನಾಡಿ ಹಿಡಿದು ಪರೀಕ್ಷಿಸಿದೆ. ಮೈ ಸ್ವಲ್ಪ ಬೆಪ್ಪಾಗಿತ್ತು.

"ಜಯಾ ...ಏನಾಗುತ್ತಿದೆ "

"ಜ್ವರ....ಹೊಟ್ಟೆನೋವು....ಅಬ್ಬಬ್ಬಾ!" ಎಂದು ಚಡಪಡಿಸಿದಳು ಆಕೆ.

"ಡಾಕ್ಟರರನ್ನು ಕರತರಿಸಲೆ!"

'ಹುಂ'

ರಾಮುವನ್ನು ನೆಟ್ಟಗೆ ಡಾಕ್ಟರರಲ್ಲಿಗೆ ಕಳುಹಿಸಿದೆ. ಕಾಲು ತಾಸಿನಲ್ಲಿಯೇ ಡಾಕ್ಟರರೂ ಬಂದರು. ರೋಗಿಯನ್ನು ಪರೀಕ್ಷಿಸಿದರು. ಪುನಃ ಪುನಃ ಪರೀಕ್ಷಿಸಿದರು. ಹೊರಗೆ ಬಂದು 'ಚಿಂತೆಯಿಲ್ಲ' ಸ್ವಲ್ಪ ಅಜೀರ್ಣವಾಗಿದ್ದಿರಬೇಕು. ನಾಳೆ ಬೆಳಿಗ್ಗೆ ನೋಡೋಣ. ನೋವಿನ ತಾತ್ಕಾಲ ಶಮನಕ್ಕೆ ಈ ಮಾತ್ರೆಯನ್ನು ನುಂಗಲು ಹೇಳಿ ಎಂದು ಅವರು ಹೊರಟು ಹೋದರು. 'ಎಲ್ಲಾ ಡಾಕ್ಟರರ ಅವಸ್ಥೆ ಇಷ್ಟೆ' ಎಂದು ಅಂದುಕೊಂಡು ನಾನು ಸುಮ್ಮನಾದೆ.

ಆದರೆ ಡಾಕ್ಟರರು ಹೊರಟು ಹೋದಾಕ್ಷಣ ಕೋಣೆಗೆ ಬಂದು ನೋಡುವುದೇನು? ಹೇಳಿದಷ್ಟೆ ನೀವು ನಂಬಲಿಕ್ಕಿಲ್ಲ–ಜಯಾ ಹಾಸಿಗೆ ಮಡಿಸಿ ಕೇಕೆಹಾಕುತ್ತ ನಗುತ್ತಿದ್ದಳು.

'ಸೀರೆಯನ್ನು ನೀವು ತರಲಿಲ್ಲ. ಅದರ ಹಣ ಡಾಕ್ಟರರಿಗೆ ಸಂದಂತಾಯಿತು. ನನಗೂ ಕಪಟ ತಿಳಿಯದೆಂದು ಎಣಿಸಿದಿರಿ?' ಎಂದು ಆಕೆ ಮೂದಲಿಸಿದಳು.

'ಸರಿ ಜಯಾ, ನೀನೇ ಹುಶಾರ್ ಮಯ್ಯಿಗೆ ಮಯ್ಯಿ ತೀರಿಸಿದೆ. ನೀನೆಲ್ಲೋ' ತಪ್ಪಿ ಹೆಣ್ಣಾದೆ· ಗಂಡಾಗಿದ್ದರೆ ನಿನ್ನ ಕಾರುಭಾರು ಎಷ್ಟಿತ್ತೋ?' ಎಂದು ಬರಸೆಳೆದು ಆವಳ ಗಲ್ಲಗಳ ಮೇಲೆ........

ಹಿಂದಿರುಗಿ ನೋಡುತ್ತೇನೆ—ರಾಮುವು ಕಿಟಕಿಟ ನಗುತ್ತಿದ್ದ.

೬

# ಟೀಪಾರ್ಟಿ

ಉಡುಪಿಯಲ್ಲಿ ಅಜ್ಜರಕಾಡೆಂದರೆ ಬೊಂಬಾಯಿಯ ಚೌಪಾಟಿ ಇಲ್ಲವೇ ಮದ್ರಾಸಿನ ಟ್ರಿಪ್ಲಿಕೇನ್ ತೀರದಂತೆ. ಅಲ್ಲಿಯ ಒಂದು ನೋಟವಿದು. ಸಮಯ ಸಾಯಂಕಾಲ ಸುಮಾರು ಆರು ಗಂಟೆ. ಬಂಡೆ ಕಲ್ಲಿನ ಮೇಲೆ ಸಾಧಾರಣ ಇಪ್ಪತ್ತೆರಡು ವರ್ಷ ಪ್ರಾಯದ ನವಯುವಕರೊಬ್ಬರು ಒರಗಿದ್ದಾರೆ. ಒಂದೆಡೆ ರೇಡಿಯೊ ಸಂಗೀತ ಕೇಳಬರುತ್ತಿದೆ; ಮತ್ತೊಂದೆಡೆ ಹೊಯಿಗೆಯಲ್ಲಾಡುವ ಮಕ್ಕಳ ಗುಲ್ಲು. ಜನರು ಅಲ್ಲಲ್ಲಿ ತಂಡತಂಡಗಳಾಗಿ ಕುಳಿತುಕೊಂಡೋ ನಿಂತುಕೊಂಡೋ ಮಾತನಾಡುತ್ತಿದ್ದಾರೆ. ಸ್ವಲ್ಪ ಹೊತ್ತಿನಲ್ಲಿ, ನಡುಪ್ರಾಯದವರೊಬ್ಬರು ಕಂಕುಳಲ್ಲಿ ಒಂದು ಮಗುವನ್ನೆತ್ತಿಕೊಂಡು ಯುವಕರಿದ್ದೆಡೆಗೆ ಬಂದರು. ಮಗುವಿನ ಹೆಸರು 'ಪುಟ್ಟು' ಎಂದು.

'Hullo Mr.!'

'Good Evening'

'Good Evening'

"ಬನ್ನಿ, ಕುಳಿತುಕೊಳ್ಳಿ"

"ಏನ್ರಿ, ಮನೆಗೆ ಬಂದ ನೆಂಟ್ರಂತೆ ಉಪಚರಿಸುತ್ತೀರಲ್ಲ"

"ಅಜ್ಜರಕಾಡು ಬಂಡೆಯಲ್ಲಿ ಎಲ್ಲರೂ ನೆಂಟ್ರೇ! ಮತ್ತೆ ಬಂದವರು ಮುಂಚೆ ಬಂದವರ ನೆಂಟ್ರು, ಅಷ್ಟೆ"

"ನೀವು ಆಗಲೇ ಬಂದಿರಾ?"

"ಏನೊಂದು ಹತ್ತು ನಿಮಿಷವಾದೀತು"

"ಮತ್ತೇನು ವಿಶೇಷ—ಏ. ಐ. ಆರ್. ಏನಂತೆ?"

"ಜಾಪಾನರು ಇರಾವತಿ ಎಣ್ಣೆ ಕಣಿಗಳನ್ನು ಮುತ್ತಿದರಂತೆ"

"ಕಣಿಗಳು ಅವರ ವಶವಾಯಿತಂತೆಯೊ?"

"ಆಗಿದ್ದಿರಬಹುದು. ಆದರೆ...."

"ಆದರೇನು?"

"ಲಂಡನ್‌ನಿಂದ ಅದು confirm ಆಗಿಲ್ಲ"

"ಸರಿ ತಾನೆ—ಅಜ್ಜರಕಾಡಿಗೆ ಬಾಂಬು ಬಿದ್ದರೂ, ಅದು ಲಂಡನ್‌ನಿಂದ confirm ಆಗದಿದ್ದರೆ ತಾವು ನಂಬಕೂಡದಷ್ಟೆ"

'ಶ್, ಶ್........ಮೆಜಿಸ್ಟ್ರೇಟರು ಹೋಗುತಿದ್ದಾರೆ. Defence of India...'

"....... ....... ..........."

'........ ...'

"ಏನ್ರಿ, ಇವತ್ತು ವಾಸುದೇವರಾಯರಾಗಲೀ, ಕಾಮತರಾಗಲೀ, ನಾಯಕರಾಗಲೀ ಯಾರೂ ಕಾಣುವುದಿಲ್ಲ?"

"ನಾನೂ ಅದೇಕೆ ಹಾಗೆಂದು ಆಲೋಚಿಸುತ್ತಾ ಇದ್ದೆ"

"ಎಲ್ಲಿಗೆ ಹೋಗಿದ್ದಿರಬಹುದೆಂದು ನಿಮ್ಮ ಅಂದಾಜು?"

"ಕಾನ್ವೆಂಟಿನ ಸ್ಕೂಲ್-ಡೇ"

"ಅದು ನಾಳೆಯೆಂಬು ತೋರುತ್ತೆ. ಎಷ್ಟಕ್ಕೂ ಇವತ್ತಲ್ಲ"

"ಅದು ಖಂಡಿತ. ಇವತ್ತಾದರೆ ನೀವು ಇಲ್ಲಿರುತ್ತಿರಲಿಲ್ಲ."

"ನೀವೂ ಇರುತ್ತಿರಲಿಲ್ಲ. ನಿಜ ಹ್ಹ ಹ್ಹ ಹ್ಹ"

"ಹಾಗಾದರೆ ಮತ್ತೆಲ್ಲಿಗೆ ಹೋಗಿದ್ದಿರಬಹುದು? ಮೀಟಿಂಗ್ ಗೀಟಿಂಗ್ ಏನಾದರೂ ಉಂಟೊ?"

"ಗೊತ್ತಿಲ್ಲವಲ್ಲಾ........ಓಹೋ! ತಿಳಿಯಿತು............ನೀವೇಕೆ ಹೋಗಲಿಲ್ಲ!"

'ಎಲ್ಲಿಗೆ'

'ಅವರೆಲ್ಲಾ ಟೀ ಪಾರ್ಟಿಗೆ ಹೋಗಿದ್ದಾರೆ'

'ಎಲ್ಲಿ ಇವತ್ತು ಟೀ ಪಾರ್ಟಿ?'

'ನನಗೂ invitation ಇತ್ತು ನೋಡಿ!'

'ಯಾಕೆ ಹೋಗಲಿಲ್ಲ?'

ಮನೆಯಲ್ಲಿ ಸ್ವಲ್ಪ ಕಾಹಿಲೆ. ಮರೆತು ಹೋಯ್ತು. ನೀವು ಯಾಕೆ ಹೋಗಲಿಲ್ಲ?'

'ನನಗೆ invitation ಇರಲೇ ಇಲ್ಲ'

'ಇರಲಿಲ್ಲ!! ಅದು ಹೇಗೆ? ನಿಮ್ಮ ಹೆಸರು listನಲ್ಲಿತ್ತು'

'ನನಗೆ ನೆನಪಿಲ್ಲವಲ್ಲಾ! ಯಾವ ಟೀ ಪಾರ್ಟಿ?'

'ನೀವು ಉಡುಪಿಯಲ್ಲಿರಲಿಲ್ಲವೊ? ಎಲ್ಲಿಗಾದರೂ ಹೋಗಿದ್ದಿರೊ'

'ಇಲ್ಲ. ಇವತ್ತು ನಾನು ಆಫೀಸಿನಲ್ಲೇ ಇದ್ದೆ.'

'ಹಾಗಾದರೆ ನಿಮ್ಮ ಹೆಸರು ಹೇಗೆ ತಪ್ಪಿ ಹೋಯ್ತು?'

'ಚಿಂತೆಯಿಲ್ಲಪ್ಪಾ; ಪಾರ್ಟಿ ಎಲ್ಲಿ?'

'ತಡೆಯಿರಿ! ನಿಮ್ಮನ್ನು ಹೇಗೆ ಬಿಟ್ಟರೆಂದೇ ನನಗೆ ಗೊತ್ತಾಗುವುದಿಲ್ಲವಲ್ಲಾ! ನಿಮ್ಮ ಹೆಸರು ಖಂಡಿತ ಅಲ್ಲಿತ್ತು.'

'ಹೋಗಲಪ್ಪಾ, ಎಲ್ಲಿಗೆ ಹೋಗಿದ್ದಾರೆಂದ್ರಿ?'

'ಊಂ, ಊಂ ......ಅಪ್ಪಾ...... ಕಡ್ಲೆ........ಕಡ್ಲೆ.'

'ಅಳಬೇಡಪ್ಪಾ.... ...ಕಡ್ಲೆಯವ ಇಲ್ಲಿಗೆ ಬರ್ಲಿ.'

'ಉಂ, ಉಂ........ಕಡ್ಲೆ...........ಅಲ್ಲಿಗೇ ಹೋಗುವಾ'

'ಹೀಗೆ ಹಟಮಾಡಿದರೆ ಇನ್ನು ಎಂದೂ ಕರೆತರಲಿಕ್ಕಿಲ್ಲ.'

'ಎಲ್ರಿ ಟೀಪಾರ್ಟಿ?'

'ಅಪ್ಪಾ.......ಕಡ್ಲೆ........ಅಪ್ಪಾ........'

'ಫಜೀತಿಯಾಯಿತಲ್ಲಾ........ಹೋಗುವಾ.......ನಿಲ್ಲು'

'ಎಲ್ರಿ ಟೀ ಪಾರ್ಟಿ!.'

'ಬಂದೆ.... ಈ ಪುಟ್ಟುವಿನ ಕಾಟ ವಿಪರೀತವಾಯಿತಲ್ಲಾ?'

'ಅರೆ, ಏನ್ರಿ, ಎಲ್ಲಿಗೆ ಹೋಗುವುದು!!'

'ನಿಲ್ಲಿ,........ಸ್ವಲ್ಪ ತಿಂಡಿ ತೆಗಿಸಿಕೊಟ್ಟು ಬರ್ತೇನೆ'

'ಮತ್ತೆ ಹೋದರೆ ಸರಿ. ಅವನೇ ಇಲ್ಲಿಗೆ ಬಂದಾನು'

'ಅಷ್ಟರ ತನಕ ಇವನನ್ನೇನು ಮಾಡ್ಲಿ?'

'ಸುಮ್ಮನಿರೊ........ಪುಟ್ಟು?'

'ನೋಡು........ಮಾಮ ಗದರಿಸುತ್ತಾರೆ. ಸುಮ್ಮನಿರು ಪುಟ್ಟು'

'ಊಂ, ಊಂ,......ಕಡ್ಲೆ... ....ಕಡ್ಲೆ'

'ಈ ವಾಲಗ ನಿಲ್ಲುವ ಹಾಗಿಲ್ಲ........ಬರುತ್ತೇನೆ.'

'ಟೀಪಾರ್ಟಿ ಎಲ್ಲಂದ್ರೆ?'

'ಬಂದೆ!— —ಈಗ ಬಂದೆ!'

'ಒಹೊಯ್, ಎಲ್ಲಿಗೆ ಹೋಗುವುದು? ಹೀಗೆ ಅರ್ಧರ್ಧ ಮಾತ ನಾಡಿ ಹೊರಟು ಬಿಟ್ಟರಲ್ಲಾ, ಪಾರ್ಟಿ ಎಲ್ಲಿ''

'ಪುಟ್ಟುವಿಗಿಂತ ನಿಮ್ಮ ಕಾಟ ಜೋರಾಯಿತಲ್ಲಾ!!'

'ಹೇಳಲೇ ಬಾರದಿತ್ತು. ಹೇಳಿದ ಮೇಲೆ ಸಂಪೂರ್ಣ ಹೇಳದೆ, ನಡುವಿನಲ್ಲೇ ಜಾರಿಬಿಡುತ್ತೀರಲ್ಲಾ, ಇದಾವ ನ್ಯಾಯ?'

ಎಲ್ಲಿಗೂ ಹೋಗುವುದಿಲ್ಲ........ಬರ್ತೇನೆ

'ಅದಾಗದು ಹೇಳಿಯೇ ಹೋಗಿ'

'ತಡೀರಿ.......ಕೈ ಬಿಡಿ'

'ಅದಾಗದು. ಹೇಳಲಿಕ್ಕೇನು ಒಂದು ತಾಸು ಬೇಕೆ?'

'ಹಾಗಾದರೆ ಕೇಳಿ. ನಾನು ಆಲೋಚಿಸುತ್ತಿರುವುದೂ ಅದನ್ನೇ – ಎಲ್ಲಿ ಟೀಪಾರ್ಟಿಯಾಗಿರಬಹುದು ಅಂತ.

'ಅಂತೂ ಇಷ್ಟರ ವರೆಗೂ ನನ್ನನ್ನು fool ಮಾಡುತ್ತಿದ್ದಿರಾ?'

'ಗೊತ್ತಿಲ್ವೆ ನಿಮಗೆ ಇವತ್ತು April 1st—All fool's Day ಅಂತ.

---

೭

# ಸುಧಾರಣೆಯ ಸೋಗಿನಲ್ಲಿ

ರಮಾನಾಥನ ಮನೆಯವರು ಹೊಸ ಬಿಡಾರ ಸೇರಿ ಒಂದೆರಡು ದಿನಗಳಾಗಿದ್ದುವಷ್ಟೆ. 'ಬರುವ ಸಪ್ಟಂಬರದಲ್ಲಾದರೂ ಮಗನು ಬಿ. ಎಲ್. ಪಾಸಾಗಬೇಕು. ಅವನ ಓದಿಗೆ ತೊಡಕಾಗಬಾರದು' ಎಂದು ನಾರಾಯಣರಾಯರು ತಮ್ಮ ಹೊಸ ಬಿಡಾರದಲ್ಲಿ ನಾಥನಿಗೆಂದು—ಬೇರೆಯೇ ಕೋಣೆಯನ್ನು ಮೀಸಲಿರಿಸಿದ್ದರು. ರಮಾನಾಥನ ಮನೋವೃತ್ತಿಯು ಮಾತ್ರ ಸಿರಿವಂತಿಕೆಯ ನಾಕದಲ್ಲಿಯೇ ಸುಳಿದಾಡುತಿತ್ತು. ಜೀವನವೆಂದರೆ ಕೇವಲ ವಿನೋದ ವಿಹಾರವೆಂದು ಅವನ ಎಣಿಕೆ. ಮರಣಪರ್ಯಂತ ಅಂತೆಯೇ ಸಾಗುವುದೆಂಬ ನಂಬಿಕೆ ಅವನಿಗೆ. ಅದಕ್ಕೆ ಸರಿಯಾಗಿ, ಅವನ ತಂದೆತಾಯಂದಿರು ಆ ಭಾವನೆಯನ್ನು ಸೊಂಪಾಗಿಯೆ ಬೆಳೆಯಬಿಟ್ಟಿದ್ದರು. ಆಧುನಿಕ ಯುವಕರು ಆಶಿಸಬಹುದಾದ ಜೀವಿತದ ಸೌಕರ್ಯಗಳೆಲ್ಲ ಅವನಿಗೆ ನಿರಾಯಾಸವಾಗಿ ಲಭಿಸುತಿದ್ದುವು—ಎಂತಲೆ ರಮಾನಾಥನು ಬಿ. ಎಲ್. ನಲ್ಲಿ ಮಾಡಿದ ಮೂರು ಪ್ರಯತ್ನಗಳೂ ನಿಷ್ಫಲವಾದುದರಲ್ಲಿ ಆಶ್ಚರ್ಯವೇನು?

ಅಂದು ಸಾಯಂಕಾಲ ಸುಮಾರು ಐದು ಗಂಟೆಯಾಗಿರಬಹುದು. ರಮಾನಾಥನು ತನ್ನ ಕೋಣೆಯಲ್ಲಿದ್ದ. ಸುಯಿಲು ಹಾಕುತ್ತ ಕಿಟಕಿಯ ಬಳಿ, ಕನ್ನಡಿಯ ಮುಂದೆ ತಲೆಬಾಚುತ್ತ ನಿಂತಿದ್ದ. ಹೊಸ ಮನೆಗೆ ಬಂದು ಒಂದೆರಡು ದಿನಗಳಾಗಿದ್ದರೂ ಅವನ ಉಡುಗೆ ತೊಡುಗೆ ಮೊದಲಾದ ಸರ್ವ ಸಾಮಗ್ರಿಗಳು ಕೋಣೆಯಲ್ಲಿ ಅಲ್ಲಲ್ಲಿಯೆ ಬಿದ್ದಿದ್ದುವು. ಮೇಜಿನ ಮೇಲೆ ಒಂದು ರೇಡಿಯೊ ನೆಲೆನಿಂತಿತ್ತು. ಅದರ ಪಕ್ಕದಲ್ಲಿ

'ದೀಪಾಲಿ'ಯ ಒಂದು ವಿಶೇಷ ಸಂಚಿಕೆ. ಬೇರೊಂದು Indian Listener. ಸಮೀಪದ ಒಂದೆರಡು ಪೆಟ್ಟಿಗೆಗಳ ಮೇಲೆ ಚೆಲ್ಲಾಪಿಲ್ಲಿಯಾಗಿ ಚದರಿದ ಹೊತ್ತಿಗೆಗಳ ಒಂದು ಹೊರೆ. ಮಂಚದ-ಚೌಕಟ್ಟಿನ ಮೇಲೆ ಅಸ್ತವ್ಯಸ್ತವಾಗಿ ಜೋತಾಡುವ ಒಂದು ಸೊಳ್ಳೆ ಪರದೆ. ಆ ಕೋಣೆಯ ನೋಟವೇ ಸಾಕಿತ್ತು - ರಮಾನಾಥನ ಸೋಮಾರಿತನಕ್ಕೆ ಬೇರೆ ಸಾಕ್ಷಿ ಬೇಕೆಂದಿರಲಿಲ್ಲ.

ರಮಾನಾಥನು 'ವಿಕ್ಟೋರಿಯಾ' ಕ್ಲಬ್ಬಿಗೆ ಟೆನ್ನಿಸ್ ಆಡಲು ಹೊರಟಿದ್ದ. ಅದರ ಪ್ರಥಮ ಸೋಪಾನವಾಗಿಯೇ ಅವನು ಕನ್ನಡಿಯೆದುರು ತನ್ನ ಸೌಂದರ್ಯಕ್ಕೆ ತಾನೆ ತಲೆದೂಗುತ್ತ ತಲೆಬಾಚುತ್ತಿದ್ದ. ಆದರೆ ಅಕಸ್ಮಾತ್ತಾಗಿ, ಅವನ ದೃಷ್ಟಿಯು ತೋಟದ ಪೇರಲೆಮರದ ಗೆಲ್ಲುಗಳ ನಡುವಿನಿಂದ ಆಚೆ ಮನೆಯ ಕಿಟಕಿಯೆಡೆಗೆ ಚಲಿಸಿತು. ಅಲ್ಲೊಬ್ಬ ಹಸುರು ಸೀರೆಯ ನೀರೆಯು ನಿಂತಿದ್ದಳು. ಸುಮಾರು ಹದಿನಾರು - ಹದಿನೇಳು ವಯಸ್ಸಿನ ಹುಡುಗಿ. ತುಂಬಿತುಳುಕುವ ಯೌವನ. ಮನಸೆಳೆಯುವ ರೂಪು. ತಾರುಣ್ಯವೆಂಬುದು ಕಾಂತಶಕ್ತಿಯೆಂದರೆ ರಮಾನಾಥನಿಗೆ ಆಕೆಯೊಂದು ಪ್ರತಿಧ್ರುವ ಪ್ರತಿಧ್ರುವಗಳು ಒಂದನ್ನೊಂದು ಆಕರ್ಷಿಸಿದುದರಲ್ಲಿ ವಿಶೇಷವೇನು? ಅದು ಸೃಷ್ಟಿಯ ನಿಯಮ. ಎಷ್ಟೆಂದರೂ ಮುರಿಯಲಾಗದ ನಿಯಮ!

ನೋಟಗಳ ವಿನಿಮಯವೇನೊ ಆಯಿತು. ಆದರೆ ಅದು ಬಹಳ ಕಾಲ ಬಾಳಲಿಲ್ಲ. ಮರುನಿಮಿಷದಲ್ಲೆ, ಹುಡುಗಿಯು ಹಿಂದೆ ಸರಿದು ಮಾಯವಾದಳು. ರಮಾನಾಥನು ಮಾತ್ರ ತಾನು ನೆಟ್ಟ ನೋಟವನ್ನು ಹಿಂದೆಗೆಯಲಿಲ್ಲ. 'ಮರಳಿ ಕಿಟಕಿಯೆಡೆಗೆ ಆಕೆ ಸುಳಿಯಬಾರದೇಕೆ? ಮಗುದೊಮ್ಮೆ ಆ ಚೆಲುವಿನ ರೂಪು ಕಣ್ಣುಗಳಿಗೆ ಹೊಳೆಯಬಾರದೇಕೆ?' ಎಂದು ಅವನು ಕಾತರಿಸತೊಡಗಿದ. ಆದರೆ ಐದಾರು ನಿಮಿಷಗಳು ಕಳೆದರೂ ರಮಾನಾಥನ ಮನೋರಥವು ಈಡೇರಲಿಲ್ಲ.

ನಿರಾಶೆಯ ಹಿಂದೆಯೇ ಹುಡುಗಿಯು ಯಾರಿರಬಹುದೆಂದು ತಿಳಿಯುವ ಕುತೂಹಲವು ಅವನ ಮನಸ್ಸನ್ನು ಕೊರೆಯ ತೊಡಗಿತು. ಅಷ್ಟರಲ್ಲೆ, ಸಾಬರ ಅಂಗಡಿಗೆ ಸಿಗರೇಟು ತರಲು ಹೋಗಿದ್ದ ಸುಬ್ಬನು ಒಳ

ಬಂದ. ರಮಾನಾಥನಿಗೆ ತನಗೆ ಬೇಕಾದ ಉತ್ತರವು ಸುಬ್ಬನಿಂದ ಸಿಗ ಬಹುದೇ ಎಂದೆನಿಸಿತು. ಆದರೆ ಕೊಲೆಮಾಡಿದ ತಪ್ಪುಗಾರನಿಗಿಂತಲೂ ಮಿಗಿಲಾಗಿ ಅವನಿಗೆ ಅಂಜಿಕೆಯಿತ್ತು! ಯಾವ ಪ್ರಶ್ನೆಯನ್ನು ಕೇಳಲಿಕ್ಕೂ ನಾಲಿಗೆಯೆತ್ತಲು ಅವನಿಗೆ ಧೈರ್ಯಸಾಲಲಿಲ್ಲ. ಹೀಗಾಗಿ, ಆವನ ಅಂತ ರಂಗದಲ್ಲಿ ಕುತೂಹಲ–ಸಂಕೋಚಗಳೊಳಗೆ ಹೋರಾಟವಾಯಿತು. ಕುತೂಹಲವೆ ಕೊನೆಗೆ ಜಯಿಸಿತು.

"ಸುಬ್ಬಾ, ಅದು ಯಾರ ಮನೆಯೆಂದು ನಿನಗೆ ತಿಳಿದಿದೆಯೆ?" ಗಂಭೀರವಾಣಿಯಲ್ಲಿ ಕೇಳಿದ ರಮಾನಾಥ.

"ಅದು ತಾನೆ! ಗಿರಿಜಮ್ಮನವರ ಮನೆಯೆನ್ನುತ್ತಾರೆ–ಸ್ವಾಮಿ" ಎಂದ ಸುಬ್ಬ.

"ಹಾಗೆಂದರೆ?"

"ಯಾರೋ ಮಂಗಳೂರವರಂತೆ. ಒಂದೆರಡು ವರ್ಷಗಳಿಂದ ಇಲ್ಲೇ ನೆಲೆಯಾಗಿದ್ದಾರೆ"

"ನಿನಗೆ ಅವರ ಪರಿಚಯವಿದೆಯೇನೊ?"

ಸುಬ್ಬನಿಗೆ ನಗು ಬಂತು.

"ಅವರಲ್ಲಿ ಗಂಡಸರಾರೂ ಇಲ್ಲ ಸ್ವಾಮಿ. ಯಾರೋ ಒಬ್ಬಿಬ್ಬರು ಬಂದು ಹೋಗುತ್ತ ಇರುತ್ತಾರೆ."

ರಮಾನಾಥನಿಗೆ ಸಂಗತಿಯು ಅಷ್ಟೊಂದು ವಿಷದವಾಗಿ ತಿಳಿಯ ಲಿಲ್ಲ. ಸಮಸ್ಯೆಯು ಇನ್ನಷ್ಟು ಪ್ರಬಲವಾಯಿತೆ ಹೊರತು ಸಮರ್ಪಕ ವಾದ ಉತ್ತರ ಸಿಗದಾಯಿತು. ಆದರೆ ಕುತೂಹಲವು ಸುಮ್ಮನಿರುತ್ತ ದೆಯೆ? ತಾನು ಕಂಡ ಹುಡುಗಿ ಯಾರಿರಬಹುದೆಂದು ನೇರಾಗಿ ಕೇಳೋ ಣವೆನಿಸಿತು ಅವನಿಗೆ. "ಇಲ್ಲ. ಅದು ಅಪಾಯಕರ. ಸುಬ್ಬನು ಬೇರೆ ಯೆಣಿಸಿ ಅಮ್ಮನೊಂದಿಗೆ ಎಲ್ಲಾದರೂ ಹೇಳಿಬಿಟ್ಟರೆ................" ಎಂದು ಹೆದರಿ ಅವನು ಅಷ್ಟರಲ್ಲೆ ತೃಪ್ತಿಗೊಂಡು ಸುಮ್ಮನಾದ. ಕೋಟು ಧರಿಸಿ, ರೇಕೆಟ್ ಹಿಡಿದುಕೊಂಡು ಅವನು ಕ್ಲಬ್ಬಿನತ್ತ ಹೊರಟುಹೋದ.

ರಮಾನಾಥನ ಮನಸ್ಸು ಅಲ್ಲೋಲ ಕಲ್ಲೋಲವಾಗಿತ್ತು. ಅವನ

ಯೋಚನೆಗಳನ್ನೆಲ್ಲ ಆ ಹುಡುಗಿಯು ಸೂರೆಗೊಂಡಿದ್ದಳು. ಅದುಕಾರಣ ಎಲ್ಲರೊಡನೆ ಗೆಲ್ಲುತಿದ್ದ ರಮಾನಾಥನು ಆ ದಿನ ರಾಮಮೂರ್ತಿಯೊಡನೆಯೂ ಸೋತ. ಹುಡುಗಿಯ ಹಂಬಲ, ಸೋಲಿನ ನೋವುಗಳಿಂದ ತುಂಬಿದ ಮನಸ್ಸಿನೊಡನೆ ರಮಾನಾಥನು ಮನೆಗೆ ಮರಳಿ ಬಂದ.

ಆ ರಾತ್ರಿ ಓದಲಿಕ್ಕೆ ಕುಳಿತಲ್ಲಿಯೂ ಅವನಿಗೆ ಮೇಲಿಂದ ಮೇಲೆ ಆಕೆಯ ನೆನಪಾಗುತಿತ್ತು. ಐದಾರು ನಿಮಿಷಗಳಿಗೊಮ್ಮೆ ಅವನ ನೋಟವು ಕಿಟಕಿಯ ಕಡೆಗೇ ಹೊರಳುತ್ತಿತ್ತು. ಕಿಟಕಿಯೇನೊ ತೆರೆದಿತ್ತು. ಆದರೆ ಆಕೆಯು ಆ ಕಡೆಗೆ ಬರುತ್ತಿರಲಿಲ್ಲ. ಕಿಟಕಿಯೊಳಗಿಂದ, ಕೋಣೆಯೊಳಗಿನ ದೀಪವು ಪಸರಿಸಿದ ನಸು ಬೆಳಕೊಂದೇ ಹೊರ ಸೂಸುತ್ತಿತ್ತು.

ಸುಮಾರು ಒಂಭತ್ತುವರೆ ಗಂಟೆಗೆ ಆ ಬೆಳಕೂ ನಂದಿಹೋಯಿತು. ಅದರೊಂದಿಗೆ ಆಕೆಯನ್ನು ಕಾಣಬಹುದೆಂಬ ರಮಾನಾಥನ ಹುಚ್ಚಾಸೆಯೂ ತೀರಿತು. ಸ್ವಲ್ಪ ಸಮಯದಲ್ಲೆ ಅವನೂ ದೀಪ ನಂದಿಸಿ ಹಾಸಿಗೆಯಲ್ಲಿ ಹೊರಳಾಡಿದ—ಹೊರಳಾಡಿದನಷ್ಟೆ!

oo oo oo

ಮರುದಿನವೂ ಬಾವಿಕಟ್ಟೆಯ ಬಳಿ ಕಾಲು ತೊಳೆಯಲು ಹೋಗುವಾಗ ಬಚ್ಚಲು ಕೋಣೆಗೆ ಹೋಗುವಾಗ, ಅಚೆತೋಟದಲ್ಲಿ ಎಲ್ಲಾದರೂ ಆಕೆಯು ಕಾಣಸಿಗುವಳೋ ಎಂಬ ಲವಲವಿಕೆಯು ಅವನ ಮನಸ್ಸನ್ನು ಬಿಗಿಹಿಡಿದಿತ್ತು. ಆದರೆ ಸಂಜೆಯವರೆಗೆ ಒಮ್ಮೆಯಾದರೂ ಆಕೆ ಅವನಿಗೆ ಕಾಣಸಿಗಲಿಲ್ಲ.

ರಮಾನಾಥನು ನಿರಾಶೆಯಿಂದ ಬೇಸತ್ತು ಮನಸ್ಸನ್ನು ಕಲ್ಲಾಗಿ ಮಾಡಿದ. ಪರೀಕ್ಷೆಯ ಯೋಚನೆಯೂ ಅವನನ್ನು ಕಂಗೆಡಿಸಿತು. "ಇಂದಿನಿಂದಲಾದರೂ ಚೆನ್ನಾಗಿ ಓದಿ ಈ ಸಲವೇ ಬಿ. ಎಲ್. ಮುಗಿಸಬೇಕು. ಆಕೆಯ ಹಂಬಲವನ್ನೇ ತೊರೆಯಬೇಕು" ಎಂದು ರಮಾನಾಥನು ಮನಸ್ಸಿನಲ್ಲೆ ಶಪಥ ಹಾಕಿದ. ಹೊಸ ಹುರುಪಿನಲ್ಲಿ ನೆರೆಮನೆಯತ್ತ ತೆರೆದಿರುವ ತನ್ನ ಕಿಟಕಿಯನ್ನು ಮುಚ್ಚಿದ.

ಏಳೆಂಟು ದಿನಗಳು ಉರುಳಿಹೋದವು. ಅವನು ತಾನು ಹಿಡಿದ

ಹಠಯೋಗದಲ್ಲಿ ಸಂಪೂರ್ಣ ಯಶಸ್ವಿಯಾದನೆಂದು ಹೇಳಬರುವಂತಿಲ್ಲ. ಆದರೆ ಮೊದಲಿನ ಒಂದೆರಡು ದಿನಗಳಲ್ಲಿಯೆ ಅವನು ನೆರೆಮನೆಯ ಗಿರಿಜಮ್ಮನ ಪರಿಚಯವನ್ನೆಲ್ಲ ಮಾಡಿಸಿಕೊಂಡಿದ್ದ. "ಆಕೆ ಮಂಗಳೂರವಳಂತೆ, ಎರಡು ಮೂರು ವರ್ಷಗಳ ಹಿಂದೆ ಒಬ್ಬ ಆಫೀಸರನೊಂದಿಗೆ ಬಂದವಳಂತೆ. ಆಫೀಸರನು ಆಸ್ಪತ್ರೆಯಲ್ಲಿ ತೀರಿಹೋದನಂತೆ. ಆಕೆ ಮಗಳೊಂದಿಗೆ ಅಲ್ಲೆ ನೆಲೆಮಾಡಿರುವಳೆಂದು" ಯಾರೋ ಗೆಳೆಯರು ಅವನಿಗೆ ಹೇಳಿದ್ದರು.

"ಆಕೆ ಯಾರೊ 'ಡಿ. ಜಿ.' ಕಣೊ. ಸ್ವಲ್ಪ ಜಾಗ್ರತೆಯಿಂದಿರಪ್ಪಾ. ಮಗಳ ಮೇಲೆ........" ಎಂದು ರಂಗಸ್ವಾಮಿ ಮೊದಲೇ ಎಚ್ಚರಿಸಿದ್ದ. ಆದ ಕಾರಣವೇ ರಮಾನಾಥನು ಆಕೆಯನ್ನು ಕನಸು ಮನಸ್ಸಿನಲ್ಲಿಯೂ ನೆನಸಲಾಗದೆಂದು ಸಾಹಸಪಡುತಿದ್ದ.

ಆಕೆಯ ರೂಪವನ್ನು ಕಂಡಾಗ ಮಾತ್ರ ಅವನ ಮನಸ್ಸು ಕದಡುತ್ತಿತ್ತು. ಒಮ್ಮೆ ಕ್ಲಬ್ಬಿಗೆ ಹೋಗುವ ದಾರಿಯಲ್ಲಿ, ಆಕೆ ಶಾಲೆಯಿಂದ ಹಿಂದಿರುಗಿ ಬರುವದನ್ನು ಕಂಡಿದ್ದ. ಒಂದೆರಡು ದಿನಗಳಿಗೊಮ್ಮೆ,- ಕೆಲವು ಸಲ ಒಂದೇ ದಿನ ಎರಡು ಮೂರು ಬಾರಿ ಕಿಟಕಿಯ ಮರೆಯಲ್ಲಿ ಆಕೆಯನ್ನು ಕಂಡಿದ್ದ. ಆದರೆ ಪ್ರತಿಸಲ "ಚೆಲುವು ಎಷ್ಟಿದ್ದರೇನು.... ಸೂಳೆ" ಎಂದು ಅವನು ತನ್ನ ನೋಟವನ್ನು ಹಿಂದೆಗೆಯುತ್ತಿದ್ದ. ಹಿಂದೆಗೆದೊಡನೆಯೆ ಅವನ ಬಲಹೀನ ಮನಸ್ಸು ಪರಿತಪಿಸುತ್ತಿತ್ತು. ಪುನಃ ದೃಷ್ಟಿ ಮೇಲಕ್ಕೆತ್ತುವಷ್ಟರಲ್ಲಿ ಆಕೆ ಅಲ್ಲಿರುತ್ತಿರಲಿಲ್ಲ.

ಅದೊಂದು ಸಂಜೆ. ಬಾನಿನಲ್ಲಿ ತುಂಬು ಮೋಡಗಳು ಮುಸುಕಿದ್ದುವು. ಮಳೆ ಬರುವ ಕುರುಹುಗಳು ಮೂಡಿದ್ದುವು. ಸುತ್ತಮುತ್ತಲೂ ಪ್ರಶಾಂತತೆಯು ಪಸರಿಸಿತ್ತು. ರಮಾನಾಥನು ತಲೆಸಿಡಿತವೆಂದು ಆಟಕ್ಕೆ ಹೋಗದೆ ಕೋಣೆಯಲ್ಲಿ ಹಾಯಾಗಿ ಒರಗಿದ್ದ. ಆಗ ತಾನೆ ನೆರೆಮನೆಯಿಂದ ವೀಣೆಯ ಸ್ವರವೊಂದು ಕೇಳಿತು. ಆಕೆ ವೀಣೆಯೊಂದಿಗೆ, ತನ್ನ ಕೊರಲ ದನಿಯನ್ನು ಜತೆಗೂಡಿಸಿ ಮಧುರವಾಗಿ ಹಾಡುತ್ತಿದ್ದಳು. ಆ ಹಾಡಾದರೊ ರಮಾನಾಥನ ಅಚ್ಚುಮೆಚ್ಚಿನದು -

"ದುನಿಯಾ ರಂಗ ರಂಗೇಲಿ | ಬಾಬಾ
ದುನಿಯಾ ರಂಗ ರಂಗೇಲಿ"

ರಮಾನಾಥನು ಒಮ್ಮೆಲೇ ಚೇತನಗೊಂಡ. ಅವನು ಹಾಡಿನ ಸವಿಯನ್ನು ಮೆಲ್ಲತೊಡಗಿದ. ಆ ಮೆಲುದನಿಗೆ ಮನಸೋತ. "ಕೋಗಿಲೆಯೊಂದು ಕಾಗೆಯ ಉದರದಲ್ಲಿ ಜನಿಸಿದಂತಾಯಿತು" ಎಂದು ಮನ ಮರುಗಿದ.

ಂಂ ಂಂ ಂಂ

ಬೇರೊಂದು ರಾತ್ರಿ, ರಮಾನಾಥನು ಕ್ಲಬ್ಬಿನಿಂದ ಮನೆಗೆ ಬಂದವನೆ ರೇಡಿಯೊ ತೆರೆದು ಅದರಲ್ಲಿ ಬೊಂಬಾಯಿಯ ಕಾರ್ಯಕ್ರಮವಿಟ್ಟಿದ್ದ ಸಿನೆಮಾ ಗೀತಗಳು ಒಂದರ ಹಿಂದೆ ಒಂದಾಗಿ ಬರತೊಡಗಿದ್ದವು. ಅಲ್ಲಿಯೂ ತನ್ನ ಪ್ರೀತಿಯ ಗೀತವೆ –

"ದುನಿಯಾ ರಂಗ ರಂಗೇಲಿ | ಬಾಬಾ
ದುನಿಯಾ ರಂಗ ರಂಗೇಲಿ."

ರಮಾನಾಥನಿಗಾದ ಆನಂದವು ಅಷ್ಟಿಷ್ಟಲ್ಲ. ಗೀತದ ಮಾಧುರ್ಯವನ್ನು ಸವಿಯುತ್ತಲೇ ಅವನಿಗೆ ಆಕೆಯ ರೂಪು ಕಣ್ಣಿಗೆ ಕಟ್ಟಿದಂತಾಯಿತು. ಕಿಟಕಿಯೆಡೆಗೆ ನೋಡುತ್ತಾನೆ-ಅದೇ ಹುಡುಗಿ. ಕೋಣೆಯೊಳಗಿನ ಮಸುಕು ಬೆಳಕಿನಲ್ಲಿ ನಿಂತು ಆ ಗೀತವನ್ನಾಲಿಸುತಿದ್ದಾಳೆ. 'ಶ್ರುತಿಯಿಂದ ಆಕರ್ಷಿಸಲ್ಪಡುವ ಹಾವಿನಂತೆ, ಗೀತದಿಂದ ಅಲ್ಲಿಗೆ ಆಕರ್ಷಿಸಲ್ಪಟ್ಟಿದ್ದಾಳೆ.' ಎಂದೆಣಿಸಿದ ರಮಾನಾಥ.

ಕೋಣೆಯಲ್ಲಿ ಸುಮಧುರ ಗಾನ. ತೋಟದಾಚೆ, ಆರೆಗತ್ತಲೆಯ ಹಿನ್ನೆಲೆಯಲ್ಲಿ ಆ ಸುಂದರಿಯ ಅಸ್ಪಷ್ಟ ಮೂರ್ತಿ–ರಮಾನಾಥನಿಗೆ ತಾನು ಸ್ವಪ್ನ ಪ್ರಪಂಚದಲ್ಲಿರುವಂತೆ ಭಾಸವಾಯಿತು. 'ಕೆಲವೇ ನಿಮಿಷಗಳಿಗಾದರೂ ತಾನು ಅಕೆಯ ಆನಂದಕ್ಕೆ ಕಾರಣನಾದೆನಲ್ಲ" ಎಂದು ಅವನ ಹರುಷವು ಎಲ್ಲೆ ಮೀರಿತು.

ಅಂದಿನ ರಾತ್ರಿಯೂ ಆಕೆಯನ್ನು ಕಂಡ ಮೊದಲಿನ ರಾತ್ರಿಯಂತೆ ಏನೇನೊ ಆಸೆ-ದುರಾಶೆಗಳು ಅವನ ಅಂತರಂಗವನ್ನು ಆಕ್ರಮಿಸಿದ್ದವು.

ಹೆಚ್ಚು ಹೊತ್ತು ಅವನಿಗೆ ನಿದ್ರೆಯೇ ಬೀಳಲಿಲ್ಲ. ರಮಾನಾಥನು ಆಕೆಯ ರೂಪು ಯೌವನಗಳಿಗಂತೂ ಮನಸೋತಿದ್ದ. ಗುಟ್ಟಿನಲ್ಲಿ ಆಕೆಯ ಸೌಂದರ್ಯದ ಆರಾಧಕನಾಗಿದ್ದ. 'ಎಷ್ಟೆಂದರೂ ಸೂಳೆ' ಎಂಬ ಅದೊಂದು ಯೋಚನೆಯೆ ಅವಳೆಡೆಗೆ ಹರಿಯುವ ಅವನ ಪ್ರೇಮದ ಹೊನಲವನ್ನು ತಡೆಗಟ್ಟುತ್ತಿತ್ತು.

ಂಂ ಂಂ ಂಂ

ಮರುದಿನ ರಾತ್ರಿ ಸುಮಾರು ಒಂಭತ್ತು ಗಂಟೆಯ ಸಮಯ ಹಾಲು ಚೆಲ್ಲಿದಂತೆ ಬೆಳದಿಂಗಳು ಹರಡಿತ್ತು. ಆಕಾಶದಲ್ಲಿ ಪೂರ್ಣ ಚಂದ್ರನು ನಳನಳಿಸುತ್ತಿದ್ದ. ಸಂಜೆ ಅರಳಿದ ಪಾರಿಜಾತಗಳ ನರುಗಂಪು ತಂಗಾಳಿಯೊಡನೆ ಕಲೆತು ತೋಟದ ಎಲ್ಲೆಡೆಗೂ ಹಬ್ಬಿತ್ತು. ರಮಾನಾಥನು ಊಟ ತೀರಿಸಿ, ಹೂದೋಟದಲ್ಲಿ ವಿಹರಿಸುತಿದ್ದ. ಅವನ ಮನಸ್ಸು ಭಾವನಾಮಯವಾಗಿತ್ತು. ಒಮ್ಮಿಂದೊಮ್ಮೆಗೆ ಅವನು ಮರುಳನಂತಾದ. ಅವನ ಕಾಲುಗಳು ತಮ್ಮಿಂದ ತಾವೇ ಪೇರಳೆಯ ಮರದೆಡೆಗೆ ಧಾವಿಸಿದುವು. ಏನೋ ಎಲ್ಲವೂ ಅವನಿಗೆ ಕನಸಿನಲ್ಲಿ ನಡೆಯುವಂತೆ ತೋರುತ್ತಿತ್ತು.

ಅಷ್ಟರಲ್ಲಿಯೆ ನೆರೆಮನೆಯ ಕೋಣೆಯೊಳಗಿಂದ ಕೆಲವು ಅಸ್ಪಷ್ಟ ವಾಕ್ಯಗಳು ಹೊರಟು ರಮಾನಾಥನ ಕಿವಿಗಳನ್ನು ಸೇರಿದವು. "ಸೀತಾ, ಹಟಹಿಡಿಯ ಬೇಡಮ್ಮಾ. ನಿನ್ನಂತೆಯೇ ನಾನೂ ಹರೆಯದಲ್ಲಿ ಹಟಹಿಡಿದಿದ್ದರೆ ನನ್ನ ಗತಿ ಏನಾಗುತಿತ್ತು?"........"ಈ ದುರ್ಗತಿಗಿಂತಲೂ ಕೀಳಾಗುತ್ತಿರಲಿಲ್ಲ".... ಇಲ್ಲಮ್ಮಾ, ಆ ಎರಡು ಸಾವಿರ ರೂಪಾಯಿಗಳು ಎಷ್ಟುಕಾಲ ಬರಬಹುದು?".......“ನೀನೂ ಸಂಪಾದಿಸಬೇಕು. ಮಗೂ" ........"ಸಾಕು, ಸಾಕು. ಸೂಳೆಯೊಡಲಲ್ಲಿ ಜನಿಸಿದ ಅದೊಂದು ಮಹಾ ಪಾತಕವೇ ಸಾಲದೆ? ಸೂಳೆಯಾಗಿಯೆ ಬಾಳಬೇಕೆ?"

ಕನವರಿಸುವಂತಿದ್ದ ರಮಾನಾಥನ ಎದೆಗೆ ಆ ಕೊನೆಯ ಮಾತು ಚೂರಿಯ ಅಲಗಿನಂತೆ ನಾಟಿತು.

ಮರುನಿಮಿಷದಲ್ಲೇ "ನಾಥೂ–ನಾಥೂ" ಎಂಬ ನಾರಾಯಣ

ರಾಯರ ಕರೆ ಕೇಳಿಸಿತು. ರಮಾನಾಥನಿಗೆ "ತಾನು ಅಲ್ಲಿಗೇಕೆ ಬಂದೆ ತಂದೆ ಏನೆಣಿಸುವರೋ? ಸುಬ್ಬಗೆ ಇದು ತಿಳಿದರೆ... ...."ಇದೊಂದೂ ಬಗೆಹರಿಯಲಿಲ್ಲ. ಅವನು ಬೆಚ್ಚಿಬಿದ್ದ. ತಡವದೆ ಮನೆಸೇರಿದ.

ಆ ರಾತ್ರಿಯೂ ರಮಾನಾಥನು ಬಹಳ ಹೊತ್ತು ಹಾಸಿಗೆಯಲ್ಲಿ ಹೊರಳಾಡುತಿದ್ದ. ಆದರೆ ಅಂದು ಅವನ ಮನಸ್ಸು ವ್ಯವಹಾರ ಪ್ರಪಂಚದ ಸೀಮೆದಾಟಿ ಆದರ್ಶ ಪ್ರಪಂಚದಾಚೆಯೆ ಸುಳಿದಾಡುತ್ತಿತ್ತು. ಆ ಹುಡುಗಿ ಅವನ ಬಗೆಯಲ್ಲಿ ಅದೊಂದು ವಿಚಾರಕ್ರಾಂತಿಯನ್ನೇ ಎಬ್ಬಿಸಿದ್ದಳು. ಸುಶಿಕ್ಷಿತೆ, ಸುಗುಣೆ, ಸುಂದರಿಯಾದ ನಿರಪರಾಧಿ ಬಾಲೆಯೊಬ್ಬಳು ಸೂಳೆಯ ಗರ್ಭದಲ್ಲಿ ಜನಿಸಿದಳೆಂದಮಾತ್ರಕ್ಕೆ ಸೂಳೆಯಾಗಿಯೇ ಬಾಳ ಬೇಕೆ? ಕುಲೀನನೊಬ್ಬನು ಆಕೆಯ ಕೈಹಿಡಿದು ಉದ್ಧರಿಸಿದರೆ ಅದು ಪಾಪವಾದೀತೆ? ಎಂದು ಅವನು ಹತ್ತಾರುಸಲ ತನ್ನಲ್ಲೇ ಪ್ರಶ್ನಿಸ ತೊಡಗಿದ.

"ಸಮಾಜದ ದೃಷ್ಟಿಯಲ್ಲಿ ಅದಕ್ಕಿಂತ ಕೀಳು ಪಾಪವಿಲ್ಲ!" ಎಂದು ಅವನ ಮನಸ್ಸು ಮಾರ್ನುಡಿದು ಸಮಾಜವನ್ನು ಮೂದಲಿಸಿತು.

೦೦ ೦೦ ೦೦

ಅಂದು ಸಂಜೆ ಐದು ಗಂಟೆಗೆ ಮಲ್ಲೇಶ್ವರದಲ್ಲಿ ಮಹಿಳಾ ಸದನದ ನೇತೃತ್ವದಲ್ಲೊಂದು ವಿಚಾರ ಕೂಟ. 'ಸಮಾಜದಲ್ಲಿ ಸ್ತ್ರೀಯರ ಸ್ಥಾನ'ವೆಂಬುದೇ ವಿಷಯ. ಸಾರ್ವಜನಿಕ ಸಭೆಯಾದುದರಿಂದ ಹೆಂಗಸು ಗಂಡಸರೆನ್ನದೆ ನೂರಾರು ಜನ ನೆರೆದಿದ್ದರು. ಅವರಲ್ಲಿ ರಮಾನಾಥನೂ ಒಬ್ಬನಾಗಿದ್ದ.

ಒಬ್ಬರ ಮೇಲೊಬ್ಬರಾಗಿ ಭಾಷಣಕಾರರು ಸ್ಫೂರ್ತಿಯ ಭಾಷಣ ಗಳನ್ನು ಮಾಡಿದರು. ವೆಂಕಟರಂಗಂನವರೆಂದರೆ ಸರ್ವಾಂತರ್ಯಾಮಿ ಭಾಷಣ ಕರ್ತರೆನ್ನಬಹುದು. ಎಂದಿನಂತೆ ಅವರ ಆವೇಶಪರ ಭಾಷಣ ವಾಯಿತು. "ದೀರ್ಘ ಭಾಷಣ"ಗಳಿಗೆ ಹೆಸರಾದವರೆಂದರೆ ನಾರಾಯಣ ಮೂರ್ತಿಯವರು. ಜನರಿಗೆ ತೂಕಡಿಕೆ ಬರುವವರೆಗೂ ಅವರೂ ಮಾತ ನಾಡಿದುದಾಯಿತು. ಬಿ. ಎಸ್. ಕೃಷ್ಣರಾಯರು ಭಾಷಣದ ನಡುವೆ

ಆಂಗ್ಲಪತ್ರಿಕೆಯಲ್ಲಿನ ಒಂದು ಲೇಖನವನ್ನೋದತೊಡಗಿದರು. ಸಭಿಕರು ಚಪ್ಪಾಳೆ ಹೊಡೆದು ತಮಗಾದ ಬೇಸರದ ಎಷ್ಟು ಕುರುಹುಗಳನ್ನು ತೋರಿಸಿದರೂ ಅವು ಪ್ರಶಂಸೆಯ ಚಪ್ಪಾಳೆಗಳೆಂದು ಭಾವಿಸಿ ಅವರು ಲೇಖನವನ್ನು ಸಂಪೂರ್ಣ ಓದಿಯೇ ವೇದಿಕೆಯು ಕೆಳಗಿಳಿದರು. ಅವರಿವರೆಂದಿಲ್ಲ–ಎಂಟು ಗಂಟೆಯವರೆಗೂ ವಿಚಾರ ಗೋಷ್ಠಿಯು ಮುಂದೆ ಸಾಗಿತು.

ಸಭಿಕರು ಒಬ್ಬೊಬ್ಬರಾಗಿಯೇ ಸದನದಿಂದ ಹೊರಬೀಳುತಿದ್ದರು. ರಮಾನಾಥನಿಗೆ ಮಾತ್ರ ಹೊರಹೋಗಲು ಮನಸ್ಸೇ ಬರಲಿಲ್ಲ. ಅವನೂ ಆ ದಿನ ಮಾತನಾಡಬೇಕೆಂದಿದ್ದ. ಸರಿ! ಅವನೂ ಹೊಸ ಹುರುಪಿನಿಂದ ವೇದಿಕೆಯನ್ನೇರಿದ.

"ಸ್ತ್ರೀಯರ ಸ್ಥಾನ"ದ ಕುರಿತು ಮಾತಾಡುತ್ತಾ "ವಿಧವಾ ವಿವಾಹ" "ಸ್ತ್ರೀ ಶಿಕ್ಷಣ" ಮೊದಲಾದ ನಿಗೂಢ ಸಮಸ್ಯೆಗಳ ಕುರಿತು ತನ್ನಲ್ಲಿ ಕುದಿಯುತಿದ್ದ ಕ್ರಾಂತಿಕಾರಕ ಅಭಿಪ್ರಾಯಗಳನ್ನೆಲ್ಲ ಅವನು ಒತ್ತಿ ಹೇಳಿದ. ಆದರೆ ಭಾಷಣದ ಕೊನೆಯಲ್ಲಿ ಅವನು ತನ್ನನ್ನೇ ತಾನು ಮರೆತಂತಿತ್ತು. "ಸಮಾಜದಲ್ಲಿ ಎಷ್ಟೊಂದು ಸ್ತ್ರೀಯರು ವೇಶ್ಯೆಯರೆಂದು ಹೊಟ್ಟೆಹೊರೆಯುತ್ತಿಲ್ಲ? ಈ ನೀಚ ವೃತ್ತಿಗೆ ಸಮಾಜವೇ ಕಾರಣ. ಆದರ ಬೆಂಬಲದಿಂದಲೇ ಈ ವೃತ್ತಿಯು ಎಷ್ಟಕ್ಕೆ ಬೆಳೆದಿದೆಯೆಂದರೆ ಸಮಾಜದಲ್ಲಿ ಸೂಳೆಯರೆಂಬ ಜಾತಿಯೇ ತಲೆದೋರಿದೆ. ಕೇವಲ ನಿರಪರಾಧಿಗಳಾಗಿದ್ದು, ತಮ್ಮ ಮನಸ್ಸಿಗೆ ವಿರುದ್ಧವಾಗಿ ಅವೆಷ್ಟೋ ಶಿಕ್ಷಿತ ಯುವತಿಯರೂ ವೇಶ್ಯೆಯರ ಗರ್ಭದಲ್ಲಿ ಜನಿಸಿದ ಕಾರಣ ವೇಶ್ಯೆಯರಾಗಿಯೇ ಬಾಳಬೇಕಾಗಿದೆ. ಈ ಕಡೆ ಕಣ್ಣೆತ್ತಿಯೂ ನೋಡುವವರಿಲ್ಲ. ತಾಯಿಯು ಕಳ್ಳತನಮಾಡಿದರೆ ಮಗಳು ಚೋರಿಣಿಯೆನಿಸಲಾರಳು. ತಾಯಿಯು ಕೊಲೆಮಾಡಿದರೆ ಮಗಳು ಕೊಲೆಗಡುಕಿಯೆನಿಸಲಾರಳು. ತಾಯಿಯು ಸುರಾಪಾನಮಾಡುವವಳಾದರೆ ಮಗಳೂ ಸುರಾಪಾಯಿನಿಯೆನಿಸಲಾರಳು. ತಾಯಿಯು ವೇಶ್ಯೆಯಾದ ಮಾತ್ರಕ್ಕೆ ಮಗಳೂ ವೇಶ್ಯೆಯಾಗಬೇಕೆ?" ಎಂಬ ನಿಷ್ಠುರದ ಮಾತಿನೊಂದಿಗೆ ಅವನು ತನ್ನ ಭಾಷಣವನ್ನು ಮುಗಿಸಿದ.

ರಮಾನಾಥನ ತತ್ವಗಳ ಅರ್ಥವೇ ಕೆಲವರಿಗಾಗಲಿಲ್ಲ. ಆದವರಲ್ಲಿ ಹಲವರು ತಮ್ಮ ತಮ್ಮೊಳಗೆ ಗೊಣಗತೊಡಗಿದರು. ರಮಾನಾಥನ ಗೆಳೆಯರೇನೊ "Congratulations. Well done" ಎಂದು ಅವನನ್ನು ಹುರಿದುಂಬಿಸಿದರು.

ಂಂ ಂಂ ಂಂ

ಭಾಷಣವಾಗಿ ಎರಡು ದಿನಗಳು ಸಂದವು. ರಮಾನಾಥನು ಊಟ ತೀರಿಸಿ, ಕೋಣೆಯಲ್ಲಿ ಕುಳಿತಿರುವ ವೇಳೆ ಅಂಚೆಯವನು ಬಂದು 'ರಮಾನಾಥರಾವ್, ಬಿ. ಎ.' ಎಂಬ ವಿಳಾಸದ ಲಕೋಟೆಯನ್ನು ಕೊಟ್ಟು ಹೋದ. ರಮಾನಾಥನು ಮದರಾಸಿನ ಮಿತ್ರರಾರೋ ತನಗೆ ಬರೆದಿರಬೇಕೆಂದೆಣಿಸಿ ಲಕೋಟೆಯನ್ನು ಬಿಚ್ಚಿದ. ಬಿಚ್ಚಿದೊಡನೆ ಅವಾಕ್ಕಾದ. ಆ ಲಕೋಟೆಯೊಳಗಿಂದ ಒಬ್ಬ ತರುಣಿಯ ಭಾವಚಿತ್ರವು ಕೆಳಗುರುಳಿತು. ರಮಾನಾಥನ ಮೈಯೆಲ್ಲಾ ಕಣ್ಣಾಯಿತು! ಕುತೂಹಲವು ಮೊದಲು ಕಾಗದವನ್ನೋದುವಂತೆ ಪ್ರಚೋದಿಸಿತು.

225, ಶಂಕರಪುರ.

ಮಹಾಶಯ,

"ಮಹಿಳಾಸದನ"ದಲ್ಲಿ ತಾವು ಮಾಡಿದ ಭಾಷಣವು ತೀರಾ ಅಭಿನಂದನೀಯವಾಗಿದೆ. ಸಮಾಜದ ಮೇಲೆ ತಮಗಿರುವ ಪ್ರೀತಿ, ದೀನ ಅನಾಥರ ಉದ್ಧಾರದ ಮೇಲೆ ತಮಗಿರುವ ಅಭಿಮಾನಗಳನ್ನು ಎಷ್ಟು ಹೊಗಳಿದರೂ ಅದು ಅಲ್ಪವೇ. ತಾವು ಭಾಷಣದ ಕೊನೆಯಲ್ಲಿ ಉದ್ದೇಶಿಸಿದ ನಿರಪರಾಧಿ ಬಾಲಿಕೆಯಲ್ಲಿ ನಾನೊಬ್ಬಳು. ತಾವು ಅವಿವಾಹಿತರೆಂದು ಕೇಳಿದೆ. ಈ ಅನಾಥೆಯನ್ನು ಕೈಹಿಡಿದು ಉದ್ಧರಿಸಬೇಕೆಂದು ಶಿರಸಾಬೇಡುವೆನು.

ತಮ್ಮ ಅಡಿಯಾಳು,
ಮೀನಾ.

ರಮಾನಾಥನ ದೃಷ್ಟಿಯು ಭಾವಚಿತ್ರದೆಡೆಗೆ ಸರಿಯಿತು. ಅಲ್ಲಿ ನೋಡುವುದೇನು? ಮುದ್ದಣನ ವರ್ಣನೆಯ ಮನೋರಮೆಯಂತಿದ್ದ

ಹುಡುಗಿ–"ಮಿಂದ ಮರಗೂಳಿನಂತೆ ಮೆಯ್ಯೊಗರ್......, ದಪ್ಪ ತುಟಿಗಳ ಚಪ್ಪಟೆ ಮೂಗಿನ ವಿಲಕ್ಷಣ ಮೂರ್ತಿ". ಚಿತ್ರವನ್ನು ಕಂಡು ರಮಾನಾಥನ ಮೊಗದಲ್ಲಿ ಕಿರುನಗೆಯೊಂದು ನಲಿಯಿತು.

ಅಷ್ಟರಲ್ಲಿ ಕೋಣೆಯ ಒಳಗೆ ಬಂದಿದ್ದ ರಾಜು "ಅಣ್ಣಾ, ಅದಾರ ಚಿತ್ರ!" ಎಂದು ಹತ್ತಿರ ಬಂದ.

"ಸುಮ್ಮನಿರೊ, ನಿನಗೇಕೆ ಅಧಿಕ ಪ್ರಸಂಗ" ಎಂದು ಅಣ್ಣ ಗದರಿಸಿದ. ಅವನು ಹೊರಹೋದ ಹೊತ್ತು ನೋಡಿ, ರಮಾನಾಥನು ಅವಸರವಸರದಿಂದ ಕಾಗದವನ್ನೂ ಚಿತ್ರವನ್ನೂ ಹರಿದು ಕಸದ ಬುಟ್ಟಿಗೆ ಬಿಸಾಡಿದ.

oo oo oo

ಮೇಲಿನ ಘಟನೆಗಳಾಗಿ ಸುಮಾರು ಒಂದುವರೆ ವರ್ಷ ಉರುಳಿ ಹೋಗಿದೆ. ಮದರಾಸಿನ ಜನರಲ್ ಹಾಸ್ಪಿಟಲಿನ ಹೆಮಿಲ್ಟನ್ ವಾರ್ಡಿನಲ್ಲಿ ಬಾಗಿಲಿಗೆ ಪಕ್ಕದ ಹಾಸಿಗೆಯಲ್ಲಿ ಮಲಗಿರುವನಲ್ಲ! ಅವನೇ ರಮಾನಾಥರಾವ್, ಬಿ. ಎ., ಬಿ. ಎಲ್. ಎಡ್ವೋಕೇಟ್ ಆಗಲು ಹಾಯ್ ಕೋರ್ಟಿಗೆ ಬಂದವನು ವಿಷಮಜ್ವರಕ್ಕೆ ಬಲಿಯಾಗಿ ಹಾಸ್ಪಿಟಲ್ ಸೇರಿದ್ದಾನೆ. ಅಲ್ಲಿಯ ಶುಶ್ರೂಷೆಯಿಂದ ಗುಣಮುಖವಾಗುತ್ತಿದ್ದಾನೆ. ಆಗಾಗ ಹಾಸಿಗೆಯ ಬಳಿಬಂದು, ನಗೆಗೂಡಿ ಮಾತಾಡಿ, ಅವನ ಅನುಪಾನಾದಿಗಳನ್ನು ನೋಡುವ ತರುಣ ದಾದಿಯಿರುವಳಲ್ಲ? ಅವಳೇ ಸೀತಾ. ಸಮಾಜವು "ಸೂಳೆ" ಎಂದು, "ಎಂಜಲು" ಎಂದು ತಿರಸ್ಕರಿಸಿದ ಸೀತಾ. ವಿಧಿವಿಲಾಸದಿಂದ ಅವರೀರ್ವರೂ ಒಂದೆಡೆ ಸೇರಿದ್ದಾರೆ. ಒಮ್ಮೆ ಪ್ರಯತ್ನಪಟ್ಟು ಮರೆತ ಸೀತೆಗೆ ತಿರುಗಿ ಮನಸೋತಿದ್ದಾನೆ ರಮಾನಾಥ.

oo oo oo

ಇಂದು ಗೋಪಾಲಪುರದ ಸಣ್ಣ ಬಂಗಲೆಯೊಂದರಲ್ಲಿ ಎಡ್ವೊಕೇಟ್ ರಮಾನಾಥನು ಸೀತೆಯೊಂದಿಗೆ ದಾಂಪತ್ಯ ಜೀವನವನ್ನು ನಡೆಯಿಸುತ್ತಿದ್ದಾನೆ. ಸಮಾಜವು ಅವನನ್ನು ಬಹಿಷ್ಕರಿಸಿದೆ. ವಿದ್ಯಾವಂತರಲ್ಲಿ ಹಲವರು ಅವನು ಧೈರ್ಯದಿಂದ ಸಾಧಿಸಿದ ಸುಧಾರಣೆಗೆ ಬೆರಗಾಗಿ.

ದ್ದಾರೆ. ಎಷ್ಟೋ ಪತ್ರಿಕೆಗಳು ದಂಪತಿಗಳ ಚಿತ್ರದೊಡನೆ ಸುಧಾರಣೆಯ ಮಹತ್ವವನ್ನು ಪ್ರಪಂಚಕ್ಕೆ ಸಾರಿವೆ.

ಆದರೆ ರಮಾನಾಥನ ಮನೋವೃತ್ತಿಯಲ್ಲಿ ಮಾರ್ಪಾಟಗಳೇನೂ ಉಂಟಾಗಿಲ್ಲ. 'ಇಂದಿನ ದಿನ ಸಂತೋಷದಲ್ಲಿ ಕಳೆದರೆ ಸರಿ. ನಾಳೆ ಪರಮಾತ್ಮನಿದ್ದಾನೆ' - ಎಂಬ ಎದೆಗಾರಿಕೆ ಅವನಲ್ಲಿದೆ. ಖರ್ಚಿಗೆ ಸಾಕಷ್ಟು ಉತ್ಪತ್ತಿಯೂ ವಕೀಲಿಯಿಂದ ಸಿಗುತ್ತಿದೆ.

ಂಂ ಂಂ ಂಂ

ರಮಾನಾಥನು ತನ್ನ ಬಂಗಲೆಯ ಕೋಣೆಯಲ್ಲಿ 'ಹಿಂದೂ ಪತ್ರಿಕೆ ಯೋದುತ್ತ ಕುಳಿತಿದ್ದ. ಒಳಗಡೆ ಸೀತಾ ಟೀ ತಯಾರಿಸುತ್ತಿದ್ದಳು. ಟೀ ತೀರಿಸಿ ಬೀಚಿಗೆ ಹೋಗುವುದೆಂದು ಗಂಡಹೆಂಡಿರ ನಿರ್ಧಾರವಾಗಿತ್ತು.

ಗಂಡನು ಕುಳಿತಲ್ಲಿಗೆ ಬಂದಳು ಸೀತಾ.

"ನೋಡಿದಿರಾ ಟ್ರಿಪ್ಲಿಕೇನಿನಲ್ಲೊಂದು ಸಮಿತಿಯ ಸ್ಥಾಪನೆಯಾಯಿತಂತೆ.... ...

"ಏಕೆ?"

"ಸಮಾಜದ ಕುರುಡುನಂಬಿಕೆಗಳನ್ನೆಲ್ಲ ಮೂಲೆಗೊತ್ತಿ ಸಮಾಜೋದ್ಧಾರ ಮಾಡಲಿಕ್ಕೆ".

"ನಾನು ಬಲ್ಲೆ - ಈ ಸಮಿತಿ ಸುಧಾರಕರನ್ನು" ಹುಸಿಮುನಿಸಿನಿಂದ ನುಡಿದಳು ಸೀತಾ.

"ನಿನಗೇಕೆ ಅವರಲ್ಲಿ ಅಷ್ಟು ಅಪನಂಬಿಕೆ?"

ನಿರುತ್ತರ.

ಸೀತಾ ಕಪ್ಪಿನಲ್ಲಿ ಟೀ ಸುರಿದಳು. ರಮಾನಾಥನು ಪೇಪರು ಕೆಳಗಿಟ್ಟು ಆಕೆಯ ಕಡೆಗೊಮ್ಮೆ ದಿಟ್ಟಿಸಿನೋಡಿದ. ಆಕೆ ಮುಗುಳುನಗು ನಗುತಿದ್ದಳು. ಅದೇಕೊ ಸೀತೆ ಅಂದಿನಷ್ಟು ಸುಂದರಿಯಾಗಿ ಅವನಿಗೆ ಎಂದೂ ತೋರಿರಲಿಲ್ಲ.

"ಸೀತಾ, ನೀನೆಷ್ಟು ಚಲುವೆ!" ಎಂದು ಅವನು ಉದ್ಗಾರವೆಳೆದ.

“ಚೆಲುವೆಯಲ್ಲದಿದ್ದರೆ ನನ್ನನ್ನು ವಿವಾಹವಾಗುತಿದ್ದಿರೆ?'' ಮುಳ್ಳಿನಂತಹ ಮರುಮಾತು.

“ನನ್ನಲ್ಲಿಯೂ ನಿನಗೆ ಅಷ್ಟು ಅಪನಂಬಿಕೆಯೆ?''

“ನಿಮ್ಮ ಅಂತರ್ಯವೆಲ್ಲ ನನಗೆ ಎಂದೋ ತಿಳಿದಿದೆ”.

“ಏನದು! ಏನದು!” ಗಾಬರಿಗೊಂಡು ಕೇಳಿದ ರಮಾನಾಥ.

“.......ಆ ದಿನ ಭಾವಚಿತ್ರವನ್ನು ಹರಿದು ಕಸದ ಬುಟ್ಟಿಗೆ ಬಿಸಾಡಿದ ನೆನಪಿಲ್ಲವೆ?”

ರಮಾನಾಥನು ತಬ್ಬಿಬ್ಬಾದ. ಅಂದಿನ ಸನ್ನಿವೇಶವು ಅವನಿಗೆ ಸರಿಯಾಗಿ ನೆನಪಿಗೆ ಬಂದಿತು.

“ಅದು ಯಾರ ಚಿತ್ರವೆಂದು ನಿನಗೆ ತಿಳಿದಿದೆಯೆ?”

“ಮತ್ತಾರದೂ ಅಲ್ಲ. ನಮ್ಮಲ್ಲಿ ಹೊರಗೆಲಸಕ್ಕಿದ್ದ ಮೀನಾಕ್ಷಿಯ ಚಿತ್ರ. ಈಗಲಾದರೂ ತಿಳಿಯಿತೆ?”

ಪತಿಯೆಡೆಗೆ ಮೊದಲನೆಯ ಸಲ ಬರುವ ನವವಧುವಿನಂತೆ ನಾಚಿ, ತಲೆತಗ್ಗಿಸಿದ ರಮಾನಾಥ!

---

೮

# ಸ್ವರ್ಗದಲ್ಲಿ ನಾರ್ಣಪ್ಪ

ಕಾತ್ತೂರು ಮಾಗಣೆ ಹೊಸಬೆಟ್ಟು ಗ್ರಾಮದ ಶಾನುಭೋಗ ನಾರ್ಣಪ್ಪನೆಂದರೆ ಬಹಳ ಕಾರುಭಾರಿನ ಜನವಾಗಿತ್ತು. ರೆವಿನ್ಯು ಇಲಾಖೆಯಲ್ಲಿ ಇಪ್ಪತ್ತು ವರ್ಷಗಳ ಸರ್ವಿಸು ನಾರ್ಣಪ್ಪನದಾಗಿತ್ತು. ಆ ಇಪ್ಪತ್ತು ವರ್ಷಗಳಲ್ಲಿ, ತರತರದ ಮರ್ಜಿಯ ತಹಸಿಲ್ದಾರರ ಕೈ ಕೆಳಗೆ ಕೆಲಸ ಮಾಡುವ ಯೋಗವು ಅವನಿಗೆ ಲಭಿಸಿತ್ತು. ಆದುದರಿಂದ ಸರ್ವಿಸು ವೃಕ್ಷದಲ್ಲಿ ನಾರ್ಣಪ್ಪನು ಪಕ್ವವಾದ ಹಣ್ಣಿನಂತಿದ್ದ. ಅಷ್ಟೇಕೆ? ಹೊಸತಾಗಿ ಇಲಾಖೆಗೆ ಸೇರಿದ ರೆವಿನ್ಯೂ ಆಫೀಸರರಿಗೆ ನಾರ್ಣಪ್ಪನ ಗೊಡವೆಯೆಂದರೆ — ಮೈ ಝುಮ್ಮೆನ್ನುವುದೂ ಇದೆ. ಏಕೆಂದರೆ- ನಾರ್ಣಪ್ಪ ಅಷ್ಟು ಅಪಾಯಕಾರಿ ವ್ಯಕ್ತಿಯಾಗಿದ್ದ. ಅವನು ಹೇಳಿದುದೇ ನ್ಯಾಯವಾಗಿತ್ತು. ಗ್ರಾಮಸ್ಥರು ಹರಕೆಯಂತೆ ಅವನಿಗೆ ಆಗಾಗ ಅರ್ಪಿಸುತ್ತಿದ್ದ ಬಾಳೆಗೊನೆ, ಜೇನುತುಪ್ಪ, ತೆಂಗಿನಕಾಯಿ ತಿಂದು ಅವನು ಸೊಕ್ಕಿದ ಹೆಮ್ಮಾರಿಯಂತಾಗಿದ್ದ.

ಶ್ಯಾನುಭೋಗ ನಾರ್ಣಪ್ಪನ ಬುದ್ಧಿವಂತಿಕೆಗಾದರೋ ಊರಿಗೆ ಊರೇ ತಲೆದೂಗುತ್ತಿತ್ತು. ಎಷ್ಟೋ ಬಾರಿ ಹೊಸತಾಗಿ ನೇಮಕ ಹೊಂದಿದ ರೆವಿನ್ಯೂ ಉದ್ಯೋಗಸ್ಥರು ಆಫೀಸ್ ಕೆಲಸದಲ್ಲಿ ಅವನ ಅನುಭವದ ಪ್ರಯೋಜನ ಹೊಂದಿದ್ದರು. ಊರಿನ ಚಿಕ್ಕಪುಟ್ಟ ವ್ಯಾಜ್ಯಗಳಲ್ಲೆಲ್ಲಾ ನಾರ್ಣಪ್ಪನು ಕೈ ಹಾಕಿ ತಾನೇ ತೀರ್ಮಾನಮಾಡಲು ಮುಂದಾಗುತ್ತಿದ್ದ. ಜನರೂ ಹೆದರಿಕೆಯಿಂದ ಅವನ ತೀರ್ಮಾನಗಳಿಗೆ ಒಪ್ಪುತ್ತಿದ್ದರು. ಹೀಗೆ ಆಗಿಂದಾಗ ಶಿವಪುರಕ್ಕೆ ಹೋಗಿಬರುವ ಕೆಲಸ—ವ್ಯಾಜ್ಯ

ಗಳ ತೀರ್ಮಾನ,-ಸ್ವಂತ ಜಮೀನನ ಬೇಸಾಯವೆಂದು ನಾರ್ಣಪ್ಪನಿಗೆ ತಲೆ ಕೆರೆದುಕೊಳ್ಳಲಿಕ್ಕೂ ಪುರುಸೊತ್ತಿರಲಿಲ್ಲ.

ನಾರ್ಣಪ್ಪನ ಗುಣದೋಷಗಳ ಹಂಬಲ ನಮಗೇಕೆ? ಅವನ ಕುಶಾಗ್ರಮತಿಯ ಕುರಿತಾಗಿಯೇ ನಾನು ಈ ಕತೆ ಹೇಳಲು ಹೊರಟೆ. ಅದನ್ನು ನಂಬುವುದು ಅಥವಾ ನಂಬದಿರುವುದು ನಿಮ್ಮ ಪಾಲಿನ ಕೆಲಸ. ಅದೊಂದು ಕತೆಯಲ್ಲ ಕನಸೆಂದರೂ ಬೇಸರವಿಲ್ಲ. ಏಕೆಂದರೆ–ಸನ್ನಿವೇಶಗಳಲ್ಲಿ ಅದೊಂದು ಕನಸಿನಂತೆಯೇ ಕಾಣಬಹುದು.

೦೦ ೦೦ ೦೦

ಐದಾರು ದಿನಗಳ ಹಿಂದೆ ಕಿಸ್ತಿನ ಕೆಲಸದ ನಿಮಿತ್ತ ಶಿವಪುರಕ್ಕೆ ಹೋಗಿದ್ದ ನಾರ್ಣಪ್ಪ ಅಂದು ರಾತ್ರಿ ತನ್ನ ಮನೆಗೆ ಹಿಂದಿರುಗಿ ಬರುತ್ತಿದ್ದ. ಹೊಟೇಲಿನ ಊಟ ಉಂಡಾದ ಬೇಸರ, 'ಬರುವ ಬುಧವಾರ ತಪ್ಪಿದರೆ-ಗುರುವಾರವೇ ಬರುವೆನೆಂದು ಹೆಂಡತಿಗಿತ್ತ ವಾಗ್ದಾನ, ಹುಣ್ಣಿಮೆಯ ಆ ಬೆಳದಿಂಗಳು–ಇವೆಲ್ಲಾ ಕಾರಣಗಳು ಒಟ್ಟಾಗಿ ಅಂದೇ ರಾತ್ರಿ ಊರಿಗೆ ಹೊರಡುವಂತೆ ನಾರ್ಣಪ್ಪನನ್ನು ಹುರಿದುಂಬಿಸಿದ್ದುವು. ಆದುಕಾರಣ ರಿಕಾರ್ಡು ಕಟ್ಟೊಂದನ್ನು ಬಗಲಿಗೆ ಹಾಕಿ, ಅವಸರವಸರವಾಗಿ ಅವನು ಮನೆಯ ಕಡೆಗೆ ಕಾಲ್ತೆಗೆದನಾದರೂ ಹತ್ತು ಮೈಲು ದೂರದ ಹೊಸ ಪೆಟ್ಟಿಗೆ ಅವನು ಮುಟ್ಟುವಾಗ ನಡುರಾತ್ರಿ ಮೀರಿತ್ತು.

ಮನೆಯಲ್ಲಿ ದೀಪವಿದ್ದಿರಲಿಲ್ಲ. ಒಳಗೆ ಹೆಂಡತಿ ಮಕ್ಕಳು ನಿದ್ರಾವಶರಾಗಿದ್ದರು. ನಾರ್ಣಪ್ಪನು ಒಂದೆರಡು ಬಾರಿ ಬಾಗಿಲುತಟ್ಟಿ, 'ಗಿರಿಜಾ, ಗಿರಿಜಾ' ಎಂದು ಕೂಗಿದ. ಆದರೆ ಒಳಗಿನಿಂದ ಯಾರೂ ಕದಲುವ ಸದ್ದು ಕೇಳಿಸಲಿಲ್ಲ. 'ಸುಮ್ಮನೆ ಯಾಕೆ ಅವಳ ನಿದ್ರೆಗೆ ಭಂಗ 'ತರಲಿ? ರಾತ್ರಿಯಂತೂ ಅರೆವಾಸಿ ದಾಟಿಯಾಯಿತು. ಚಾವಡಿಯಲ್ಲೇ ಮಲಗಿಕೊಂಡು ಉಳಿದ ಅರ್ಧವನ್ನು ಕಳೆದರಾಯಿತು' ಎಂದು ನಾರ್ಣಪ್ಪ ಮನಸ್ಸಿನಲ್ಲಿಯೇ ನಿರ್ಧರಿಸಿದ. ರಿಕಾರ್ಡಿಗೆ ಸುತ್ತಿದ ಎಲವಸ್ತ್ರದಿಂದ ಚಾವಡಿಯ ಕಸವನ್ನಷ್ಟು ದೂರಮಾಡಿದ. ಪುನಃ ಆ ವಸ್ತ್ರದಿಂದ ರಿಕಾರ್ಡನ್ನು ಸುತ್ತಿ, ಕೋಟನ್ನು ಕಳಚಿ ತಲೆದಿಂಬಾಗಿಟ್ಟು ಅಲ್ಲೇ ನೆಲದ ಮೇಲೆ

ಮಲಗಿಕೊಂಡ. ಅಂಗಳದಲ್ಲಿ ತಿಂಗಳ ಬೆಳಕು ಚೆನ್ನಾಗಿ ಹರಡಿತ್ತು. ಆ ಬೆಳಕಿನ ಸಾಮಿಪ್ಯದಿಂದ ಚಾವಡಿಯ ಮೇಲುಂಟಾದ ಅರೆಗತ್ತಲಿನಲ್ಲಿ ನಾರ್ಣಪ್ಪನು ನಿದ್ದೆಹೋದ. ಹತ್ತು ಮೈಲು ನಡೆದು ಬಂದ ದಣಿವು ತಾನೆ? ಸ್ವಲ್ಪ ಸಮಯದಲ್ಲೇ ಅವನಿಗೆ ನಿದ್ದೆಯ ಜೊಂಪು ಹಿಡಿಯಿತು.

oo oo oo

ಯಾರೋ ಮೆಲ್ಲನೆ ನಾರ್ಣಪ್ಪನ ಎದೆ ತಟ್ಟಿ ಅವನನ್ನು ಎಚ್ಚರಿಸಿದಂತಾಯಿತು. ನಾರ್ಣಪ್ಪನು ಕಣ್ಣು ತೆರೆದು ಪಿಳಿಪಿಳಿ ನೋಡಿದ. ಚಾವಡಿಯಲ್ಲಿ ಇಬ್ಬರು ವ್ಯಕ್ತಿಗಳು ನಿಂತಿದ್ದಾರೆ. ಅವರ ವೇಷಭೂಷಣಗಳಾಗಲೀ ಮುಖಭಂಗಿಯಾಗಲೀ ಸ್ಪಷ್ಟ ತೋರುತ್ತಿಲ್ಲ.

'ಯಾರಲ್ಲಿ?' ಎಂದು ನಾರ್ಣಪ್ಪನು ಕುತೂಹಲದಿಂದ ಕೇಳಿದ.

'ಹ ಹ ಯಾರೇ! ನಾವು ಯಾರೆಂದು ಗೊತ್ತಾಗಲಿಲ್ಲವೆ?' ಎಂದು ಆಗಂತುಕರಿಬ್ಬರು ವಿಕಟ ನಗುವೊಂದನ್ನು ನಕ್ಕರು. ನಾರ್ಣಪ್ಪನು ತನ್ನನ್ನೇ ತಾನು ನಂಬಲಿಲ್ಲ.

'ಯಾರು!.......ಯಾರು!!' ಎಂದು ಆಶ್ಚರ್ಯಚಕಿತನಾಗಿ ಮಗುದೊಮ್ಮೆ ಕೇಳಿದ.

'ಮತ್ತಾರೂ ಅಲ್ಲ—ಯಮದೂತರು. ಈಗಲೇ ಹೊರಡು" ಎಂದರು ಆಗಂತುಕರು.

'ಎಲ್ಲಿಗೆ?'

'ಯಮಪುರಕ್ಕೆ'

'ಯಾಕೆ?'

'ಯಾಕೆಂದು ಕೇಳುತ್ತಿಯಾ? ಪ್ರಭುಗಳ ಅಣತಿಯಾಗಿದೆ-ನಿನ್ನನ್ನು ಕರತರಲೆಂದು. ನಿನ್ನ ಕೀರ್ತಿಯು ನರಕದ ವರೆಗೂ ಪಸರಿಸಿದೆ. ನರಕಾಧಿಪನು ನಿನ್ನನ್ನು ನೋಡಲಪೇಕ್ಷಿಸಿ ಎಷ್ಟೋ ಸಮಯವಾಯಿತು-ನಿನ್ನ ಸಮಯವನ್ನು ಕಾದು ಕಾದು ನಮಗೆ ಬೇಸರ ಬಂತು ನಿನಗೆ

ಬಿಡು ದೊರೆತರೂ ಆಫೀಸರರು ಬಿಡಬೇಕಲ್ಲ.' ಎಂದು ಯಮದೂತರು ತಾವು ಬಂದ ಕಾರ್ಯಕಾರಣವನ್ನು ತಿಳಿಸಿದರು.

'ಸರಕಾರಿ ಆಫೀಸರರಿಗೆ ಯಮದೂತರೂ ಹೆದರುತ್ತಾರೆಯೆ? ಸರಿ. ಒಳ್ಳೆಯದಾಯಿತು.' ಎಂದು ನಾರ್ಣಪ್ಪ ತುಸು ಹೊತ್ತು ಆಲೋಚಿಸಿ ಕುಳಿತುಕೊಂಡ. 'ನಾನು ಈಗಲೇ ಹೊರಟೆ. ಆದರೆ....ಒಂದು ರಜೆ ಅರ್ಜಿ ಬರೆಯಲಿಕ್ಕಿದೆ. ತಮ್ಮ ಪ್ರಭುವರ್ಯರಲ್ಲಿಯೂ ನನ್ನದೊಂದು ಅರಿಕೆಯಿದೆ. ಬರೆಯಲು ಸಮಯ ಸಿಕ್ಕೀತೆ?' ಎಂದು ಅವನು ಬೇಡಿದ.

''ಆಗಲಿ, ನಿನ್ನ ಕೆಲಸವನ್ನೆಲ್ಲ ಮುಗಿಸಿಬಿಡು. ಅವಸರವಿಲ್ಲ. ಬೆಳಗಾಗುವುದರೊಳಗೆ ಯಮಪುರವನ್ನು ಸೇರಿದರಾಯಿತು' ಎಂದು ಹೇಳಿ ಅವರು ಚಾವಡಿಯಲ್ಲೇ ಮಂಡಿಸಿದರು.

ನಾರ್ಣಪ್ಪನಾದರೋ ತಲೆಯ ಅಡಿಯಲ್ಲಿಟ್ಟಿದ್ದ ಕೋಟಿನ ಜೇಬಿನಿಂದ ಲೇಖನ ಸಾಮಗ್ರಿಗಳನ್ನು ಹೊರತೆಗೆದ. ರಿಕಾರ್ಡು ಕಟ್ಟನ್ನು ತಿರುವಿ ನಡುವೆಯಿದ್ದ ಎರಡು ಕಾಗದದ ತುಂಡುಗಳನ್ನು ತೆಗೆದುಕೊಂಡ. ಚಾವಡಿಯಲ್ಲಿ ಚಂದ್ರಪ್ರಕಾಶವಿದ್ದ ಮೂಲೆಗೆ ಹೋದ. ಅಡಿಯೊತ್ತಿಗೆ ರಿಕಾರ್ಡು ಕಟ್ಟನ್ನಿಟ್ಟು, ಎರಡು ಪತ್ರಗಳನ್ನು ಬರೆದ. ಪತ್ರಗಳನ್ನು ಸರಕಾರಿ ಲಕೋಟೆಗಳಲ್ಲಿಯೇ ತುರುಕಿಸಿ, ಒಂದರ ಮೇಲೆ 'ಮ. ರಾ. ದ. ಕ. ಜಿಲ್ಲಾ, ಶಿವಪುರ ತಾಲೂಕು, ತಹಶಿಲ್ದಾರವರ ಸನ್ನಿಧಾನಕ್ಕೆ' ಎಂದೂ, ಮತ್ತೊಂದರ ಮೇಲೆ 'ಬಹುಮಾನಪಟ್ಟ ನರಕ ಚಕ್ರವರ್ತಿ ಯಮಧರ್ಮರಾಯರಿಗೆ' ಎಂದೂ ವಿಳಾಸ ಬರೆದು, ಮೊದಲನೆಯ ಕವರನ್ನು ತನ್ನ ಕೋಟಿನ ಸಮೀಪದಲ್ಲಿಟ್ಟು ಎರಡನೆಯದನ್ನು ತನ್ನನ್ನು ಕರೆದೊಯ್ಯಲು ಬಂದಿದ್ದ ಆಗಂತುಕರಲ್ಲೊಬ್ಬನ ಕೈಗೆ ಕೊಟ್ಟ.

''ಸಿದ್ಧನಾದೆ. ಅಪ್ಪಣೆಯಾಗಲಿ' ಎಂದು ನಾರ್ಣಪ್ಪನೆಂದ.

ಂಂ ಂಂ ಂಂ

ಅನಂತರ ತನಗೇನಾಯಿತೆಂದು ನಾರ್ಣಪ್ಪನೇ ಅರಿಯ. ಆಗಂತುಕರು ತನ್ನನ್ನು ಸರಸರನೇ ಎಳೆದುಕೊಂಡು ಯಾವುದೋ ಗನಿಗೆ ಕೊಂಡು ಹೋಗುತ್ತಾರೆ ಎಂದು ಅವನು ಊಹಿಸಿಕೊಂಡ. ಆದರೆ ಆ ಗನಿಗೆ

ತಳವೇ ಇಲ್ಲವೆ?........... ಆಶ್ಚರ್ಯ................ನಾರ್ಣಪ್ಪನಿಗೆ ತಲೆ ತಿರುಗಿದಂತಾಗಿ ಅವನು ಮೂರ್ಛಿತನಾದ.

ಮರಳಿ ಅವನು ಕಣ್ತೆರೆದುದೆಂದರೆ ಅದು ಯಮರಾಜನ ಓಲಗದಲ್ಲಿ. ದೂತರು ಸಿಂಹಾಸನಾರೂಢರಾದ ತಮ್ಮ ಚಕ್ರವರ್ತಿಗಳ ಮುಂದೆ ನಾರ್ಣಪ್ಪನನ್ನು ತಂದು ನಿಲ್ಲಿಸಿದರು. ಅವರಲ್ಲೊಬ್ಬನು 'ಪರಾಕು! ಪ್ರಭುವರ್ಯರ ಅಪ್ಪಣೆಯಂತೆ ಭೂಲೋಕದಲ್ಲೆಲ್ಲಾ ಹೆಸರಾದ ಈ ವ್ಯಕ್ತಿಯನ್ನು ಕರೆತರಲು ನಮಗೆ ಇಷ್ಟು ವಿಳಂಬವಾದುದಕ್ಕಾಗಿ ಕ್ಷಮಿಸಬೇಕು. ಮಹತ್ವದ ಸರಕಾರಿ ಕೆಲಸದ ತರಾತುರಿಯಲ್ಲಿ ಇವನ ಬಿಡುವೇ ನಮಗೆ ದೊರೆಯಲಿಲ್ಲ' ಎಂದು ನೆಲಮುಟ್ಟಿ ನಮಸ್ಕರಿಸಿದ. ಮತ್ತೊಬ್ಬನು 'ಮಹಾಪ್ರಭುಗಳಿಗೆ ಒಂದು ಪತ್ರವಿದೆ' ಎಂದು ನಾರ್ಣಪ್ಪನ ಲಕೋಟೆಯನ್ನು ಯಮರಾಜನ ಕಾಲಬುಡದಲ್ಲಿಟ್ಟು ದೂರಸರಿದ. ಯಮಧರ್ಮರಾಜನು ವಿಸ್ಮಿತನಾದ 'ಚಿತ್ರಗುಪ್ತರೇ, ಪತ್ರವೇನೆಂದು ತಿಳಿಸೋಣಾಗಲಿ' ಎಂದ. ಚಿತ್ರಗುಪ್ತನು ಓದಿದ ಪತ್ರದಲ್ಲಿ ಹೀಗಿತ್ತು.

ಯಮಧರ್ಮರಾಯನಿಗೆ:—

ನಿನ್ನ ದೂತರು ಬಲಾತ್ಕಾರದಿಂದ ಎಳೆದು ತಂದಿರುವ ಈ ವ್ಯಕ್ತಿಯು ಸಾಮಾನ್ಯನಲ್ಲ. ಇವನು ನನ್ನ ಸ್ವಾಮಿ. ನಾನೂ ಇವನಿಗೆ ಮೆಚ್ಚಿರುವೆನು. ನೀನು ಕೂಡಲೇ ನಿನ್ನ ಪಟ್ಟವನ್ನು ಇವನಿಗೆ ಬಿಟ್ಟುಕೊಡತಕ್ಕದ್ದು. ತಿಳಿದಿರಲಿ.

—**ನಾರಾಯಣ.**

ಪತ್ರದ ಒಕ್ಕಣೆಯನ್ನು ತಿಳಿಯುತ್ತಲೇ ಸಭಿಕರೆಲ್ಲ ಆವಾಕ್ಕಾದರು. ಶ್ರೀಮನ್ನಾರಾಯಣನ ಚರಣಕಿಂಕರನಾದ ಯಮನಿಗೆ ಯಜಮಾನರಿಂದ ದೊರೆತ ಆಣತಿ!—ಮೀರಲು ಸಾಧ್ಯವಿದೆಯೆ? ಮೀರಿದರೆ ಶ್ರೀಮನ್ನಾರಾಯಣನಿಗೇನೇ ಅಪಮಾನಿಸಿದಂತೆ! ಅದು ಕಾರಣ ಯಮನು ತನ್ನ ಸಿಂಹಾಸನದಿಂದ ಕೆಳಗಿಳಿದ. 'ಮಹಾಸ್ವಾಮಿ! ಕ್ಷಮಿಸಿರಿ. ತಾವು ಅಗ್ರಾಸನವನ್ನು ಸ್ವೀಕರಿಸಬೇಕು. ನಾನು ತಮ್ಮ ದಾಸಾನುದಾಸ' ಎಂದು ಯಮನು ನಾರ್ಣಪ್ಪನಿಗೆಂದ. ಮತ್ತೇನು? ಶ್ಯಾನುಭೋಗ ನಾರ್ಣಪ್ಪನೇ ಇಂದು ನರಕದ ಚಕ್ರವರ್ತಿ–ಪದವಿಗೆ ಅರ್ಹನಾದ ವ್ಯಕ್ತಿ.

ನಾರ್ಣಪ್ಪನು ನರಕದ ಪಟ್ಟವನ್ನೇರುತ್ತಲೇ ಹೊಸ ಹೊಸ ಶಾಸನಗಳನ್ನು ಜಾರಿಗೆ ತಂದ. ತಾನು ನರಕದ ಸಿಂಹಾಸನವೇರಿದ ಗೌರವಾರ್ಥವಾಗಿ ನರಕದಲ್ಲಿ ಬಂಧಿತರಾಗಿದ್ದು ಪರಿಪರಿಯ ಯಾತನೆಗಳನ್ನು ಅನುಭವಿಸುತ್ತಿದ್ದ ಪಾತಕಿಗಳೆಲ್ಲ ಬಂಧನದಿಂದ ಮುಕ್ತರಾಗಲಿ,—ಅವರೆಲ್ಲಾ ಸ್ವರ್ಗಲೋಕಕ್ಕೆ ತೆರಳಲಿ–ಎಂದು ಆಜ್ಞೆಯನ್ನು ಹೊರಡಿಸಿದ ನಾರ್ಣಪ್ಪ. ಅಂತೂ ನರಕದಲ್ಲೆಲ್ಲ ಗೌಜಿಯೋ ಗೌಜಿಯಾಯಿತು. ತಮ್ಮ ಉದ್ಧಾರಕ್ಕಾಗಿ ಭೂಲೋಕದಿಂದ ಯಾವನೋ ಒಬ್ಬ ಮಹಾನುಭಾವ ಬಂದಿರುವನಂತೆ, ಅವನ ಕೃಪೆಯಿಂದಲೇ ತಮಗೆ ಸ್ವರ್ಗ ಪ್ರಾಪ್ತಿಯಾಗಲಿದೆಯಂತೆ' ಎಂದು ತಿಳಿದೊಡನೆ ಆ ಪಾಪಾತ್ಮರಿಗೆಲ್ಲ ಸಂತೋಷದ ಎಲ್ಲೆ ಮೀರಿತು. ಮಹದಾನಂದದಿಂದ ಅವರು ಸ್ವರ್ಗಾರೋಹಣ ಮಾಡಲು ಆರಂಭಿಸಿದರು.

ಆದರೆ ಸ್ವರ್ಗದಲ್ಲಿ ಸ್ಥಳಾವಕಾಶವಿರಬೇಕಷ್ಟೆ! ಸ್ವಲ್ಪ ಹೊತ್ತಿನಲ್ಲಿಯೇ ನರಕದಿಂದ ಗುಳೇಬಂದ ಪಾಪಾತ್ಮರಿಂದಲೇ ಸ್ವರ್ಗವೆಲ್ಲ ಕಿಕ್ಕಿರಿದು ಹೋಯಿತು. ನಾರ್ಣಪ್ಪನ ದೆಸೆಯಿಂದ ಸ್ವರ್ಗದಲ್ಲಿಯೂ ಹಾಹಾಕಾರವೆದ್ದಿತು. ಸ್ವರ್ಗಪಾಲಕರಾದ ದೇವತೆಗಳು ಭಗವಂತನಲ್ಲಿಗೆ ಹೋಗಿ ಮೊರೆಯಿಟ್ಟರು. 'ದೇವಾಧಿದೇವ! ನರಕಕ್ಕೆ ನರಲೋಕದಿಂದ ನೂತನ ಯಮನೊಬ್ಬ ಬಂದಿರುವನಂತೆ. ನರಕದಲ್ಲಿದ್ದ ಪಾಪಿಗಳನ್ನೆಲ್ಲ ಬಿಡುಗಡೆಮಾಡಿ ಸೀದಾ ನಮ್ಮ ರಾಜಧಾನಿಗೆ ಕಳುಹಿಸುತ್ತಿರುವನಂತೆ. ಸ್ವರ್ಗದಲ್ಲಿ ಕಾಲೂರಲಿಕ್ಕೂ ಸ್ಥಳವಿಲ್ಲದಂತಾಗಿದೆ. ದಯಮಾಡಿ ಇದರ ವಿಚಾರಣೆಯಾಗಬೇಕು' ಎಂದು ಅವರೆಲ್ಲ ಪರಮಾತ್ಮನೊಡನೆ ಪ್ರಾರ್ಥಿಸಿದರು.

ದೇವತೆಗಳ ಈ ಮೊರೆಯನ್ನು ಕೇಳಿ ಭಗವಂತನು ಸಿಟ್ಟಿನಿಂದ ಕಿಡಿಕಿಡಿಯಾದನು. 'ಅಬ್ಬಾ! ಭೂಲೋಕದ ಒಂದು ನರಹುಳುವಿಗೆ ಇಷು ಸಾಮರ್ಥ್ಯವು ಬಂತೇ! ಯಾರಲ್ಲಿ! ಅವನನ್ನು ಕೂಡಲೇ ನನ್ನ ಸಮ್ಮುಖಕ್ಕೆ ಕರೆತನ್ನಿರಿ' ಎಂದು ಅವನು ಇಬ್ಬರು ದೂತರನ್ನು ನರಕಕ್ಕೆ ಅಟ್ಟಿದನು.

ಪಾಪ! ನಾರ್ಣಪ್ಪನ ನರಕದಲ್ಲಿನ ಲೀಲೆಯು ಅಲ್ಲಿಗೇ ಮುಗಿದಂತಾಯಿತು.

ದೇವದೂತರು ನಾರ್ಣಪ್ಪನನ್ನು ಸ್ವರ್ಗಕ್ಕೊಯ್ದು ಶ್ರೀಮನ್ನಾರಾಯಣನ ಸನ್ನಿಧಿಯಲ್ಲಿ ನಿಲ್ಲಿಸಿದರು. ನಾರ್ಣಪ್ಪನ ವಿಚಾರಣೆಯೂ ನಡೆಯಿತು. "ಭಗವಾನ್ ಶ್ರೀ ನಾರಾಯಣನ ಸಹಿಯನ್ನೇ ಅನುಕರಿಸಿ, ನರಕದ ಪಟ್ಟವನ್ನೇರಲು ಹವಣಿಸಿದ ಪಾತಕಕ್ಕಾಗಿ ನಾರ್ಣಪ್ಪನಿಗೆ ಸದಾಕಾಲ ನರಕ ಸಂಕಷ್ಟಗಳು ಪ್ರಾಪ್ತವಾಗಬೇಕು. ಅಲ್ಲದೆ ನಾರ್ಣಪ್ಪನು ತೀರಾ ಅಸಾಧಾರಣ ವ್ಯಕ್ತಿಯಾದುದರಿಂದ ಅವನಿಗಾಗಿ ಪ್ರತ್ಯೇಕ ನರಕದ ಸಿದ್ಧತೆಯಾಗಬೇಕು" ಎಂದು ಆಜ್ಞೆ ಹೊರಟಿತು.

ಕಠಿನತಮವಾದ ಈ ಶಿಕ್ಷೆಯು ತನಗೆ ದೊರೆತೊಡನೆ ನಾರ್ಣಪ್ಪನು ತನ್ನ ಅವಸ್ಥೆ ತೀರಿತೆಂದು ತಿಳಿಯಬೇಕಿತ್ತು. ಆದರೆ ಅವನು ಬೆಚ್ಚಲಿಲ್ಲ, ಬೆದರಲಿಲ್ಲ. ಅವನು ಶಾಂತಸ್ವರದಲ್ಲಿ "ಕರುಣಾಳು ಭಗವಂತನೊಡನೆ ನನ್ನದೊಂದು ಕಿರಿಯ ವಿಜ್ಞಾಪನೆಯಿದೆ. ನನಗೇನೊ ಅಥವಾಥಮರಿಗೂ ಸಿಗಲಾರದಂತಹ ಕಠಿನ ಶಿಕ್ಷೆಯು ದೊರೆಯಿತು. ಅದು ನನ್ನ ಪ್ರಾರಬ್ಧ. ಅದಕ್ಕಾಗಿ ನಾನು ಯಾರನ್ನೂ ದೂರಲಾರೆ. ಆದರೆ ಶಿಕ್ಷೆಯನ್ನು ಅನುಭವಿಸುವ ಮೊದಲು ಒಮ್ಮೆ ನರಲೋಕಕ್ಕೆ ಹೋಗಿ ನನ್ನ ಮಾನವ ಬಂಧುಗಳನ್ನು ಕಂಡುಬರಬೇಕೆಂಬ ಅಂತಿಮ ಆಸೆಯಿದೆ. ಆ ಆಸೆಯನ್ನು ನೆರವೇರಿಸಬೇಕಾಗಿ ನನ್ನ ದೀನ ಅರಿಕೆ" ಎಂದು ಹೇಳುತ್ತಾ ಭಗವಂತನ ಕಾಲಿಗೆ ಅಡ್ಡಬಿದ್ದ. ಭಗವಂತನಿಗೂ ತುಸು ಕರುಣೆ ಹುಟ್ಟಿರಬೇಕು. "ಆಗಲಿ, ನಿನ್ನ ಇಚ್ಛೆಯಂತೆ ನೀನು ಮರಳಿ ನರಲೋಕಕ್ಕೆ ಹೋಗಬಹುದು. ಆದರೆ ನಾಳೆಯೇ ಹಿಂದಿರುಗಿ ಬಂದು ನೀನು ಮಾಡಿದ ಕೆಲಸಗಳನ್ನೆಲ್ಲ ನಮಗೆ ಅರುಹಬೇಕು. ನಿನ್ನೊಂದಿಗೆ ಇಬ್ಬರು ದೂತರನ್ನು ಕಳುಹಿಸುವೆನು. ಅವರು ಮಾನವರ ಕಣ್ಣಿಗೆ ಗೋಚರವಾಗದಂತೆಯೇ ನಿನ್ನೊಡನಿದ್ದು ನಿನ್ನ ಆಶೆಯು ತೀರಿದ ಬಳಿಕ ನಿನ್ನನ್ನು ಇಲ್ಲಿಗೆ ಕರೆದೊಯ್ಯುವರು. ನೀನು ನಿಶ್ಚಿಂತೆಯಿಂದ ಹೋಗಿ ಬಾ" ಎಂದು ಭಗವಂತನ ಆಜ್ಞೆಯಾಯಿತು.

ಆಜ್ಞಾನುಸಾರ ನಾರ್ಣಪ್ಪನು ದೇವದೂತರ ಬೆಂಗಾವಲಿದ್ದು ನರಲೋಕಕ್ಕೆ ಮರಳಿಹೋದನು. ಮರುದಿನವೇ ದೂತರು ಅವನನ್ನು

ಕೊಂಡು ಹೋಗಿ ಭಗವಂತನ ಸಮಕ್ಷಮದಲ್ಲಿ ನಿಲ್ಲಿಸಿದರು. ಆಗ ಶ್ರೀ ಮನ್ನಾರಾಯಣನು 'ಎಲೆ ನರಜೀವಿಯೆ! ನೀನು ಮಾನವ ಪ್ರಪಂಚಕ್ಕೆ ಹೋಗಿ ಒಂದು ದಿನವಿದ್ದು ಮಾಡಿದುದಾದರೂ ಏನು? ಸಿದ್ಧಿಸಿದ ಅಭೀಷ್ಟವಾದರೂ ಯಾವುದು?" ಎಂದು ಪ್ರಶ್ನಿಸಿದನು.

ಅದಕ್ಕೆ ನಾರ್ಣಪ್ಪನು ಉತ್ತರವೀಯುತ್ತಾ 'ಭಗವಾನ್, ಪ್ರಪಂಚದಲ್ಲಿ ಒಂದು ನಂಬಿಕೆಯುಂಟು– ಏನೆಂದರೆ ನಿನ್ನನ್ನು ಧ್ಯಾನಿಸಿ, ಒಲಿಸಿ, ನಿನ್ನ ದರ್ಶನವಾದ ಮಾತ್ರಕ್ಕೆ ನರನಿಗೆ ಮೋಕ್ಷಪ್ರಾಪ್ತಿಯಾಗುವುದು ಎಂಬುದಾಗಿ. ಆದರೆ ಆ ನಂಬಿಗೆಯು ನಿರಾಧಾರವಾದುದೆಂದು ನನಗೀಗ ಬಗೆಹರಿಯಿತು. ನಾನು ನಿನ್ನನ್ನು ಧ್ಯಾನಿಸದೆಯೆ, ಒಲಿಸದೆಯೆ, ನಿನ್ನ ದರ್ಶನವನ್ನು ಪಡೆದುದು ಮಾತ್ರವಲ್ಲ, ನಿನ್ನೊಡನೆ ಮಾತನಾಡುವ ಸುಯೋಗವೂ ನನಗೆ ಲಭಿಸಿತು. ಮಾನವರ ನಂಬಿಕೆಯು ನಿಜವಾದುದೇ ಆಗಿದ್ದರೆ ನನಗೆ ಉತ್ತಮೋತ್ತಮ ಮೋಕ್ಷವು ಪ್ರಾಪ್ತವಾಗಬೇಕಿತ್ತು. ಅದಕ್ಕೆ ವಿರುದ್ಧವಾಗಿ ನನಗೇನು ದೊರಕಿತು? ರೌರವ ನರಕ. ಅನಂತ ಕಾಲ ನರಕ ಸಂಕಷ್ಟ. ಇದರಿಂದ ಮಾನವರು ತುಂಬಾ ಪಾಠ ಕಲಿಯಲಿಕ್ಕಿದೆ. ನನ್ನಂತೆಯೇ ಭಗವಂತನನ್ನು ನಂಬಿ ನೀವೂ ಮೋಸಹೋಗಬೇಡಿರೆಂದು ನಾನು ಮಾನವ ಜನಾಂಗಕೆಲ್ಲ ಸಾರಿಬಂದಿರುವೆನು ಆ ಒಂದು ಪುಣ್ಯವಾದರೂ ನನಗೆ ಲಭಿಸಲೆಂದು" ಎಂದು ಅವನು ತಾನು ಹೋದ ಕಾರ್ಯನಿಮಿತ್ತವನ್ನು ಭಗವಂತನಲ್ಲಿ ನಿವೇದಿಸಿದನು.

ನಾರ್ಣಪ್ಪನ ಉತ್ತರವನ್ನು ಕೇಳಿ, ನಾರಾಯಣನಿಗೆ ವಿವೇಕೋದಯವಾಯಿತು. "ಹೌದು ನಾರ್ಣಪ್ಪ' ನೀನೆಂದಂತೆ ನನ್ನ ದರ್ಶನಮಾತ್ರದಿಂದ ನಿನಗೆ ಮೋಕ್ಷವು ಲಭಿಸಬೇಕಿತ್ತು. ಸಿಟ್ಟಿನ ಭರದಲ್ಲಿ ನಾನು ಆದನ್ನೆಲ್ಲ ಮರೆತು ಏನೋ ಕಠಿಣ ಶಿಕ್ಷೆಯನ್ನು ನಿನಗೆ ವಿಧಿಸಿದೆನು. ಅದು ನನ್ನ ತಪ್ಪು. ಆ ಶಿಕ್ಷೆಯನ್ನು ನಾನು ಹಿಂದೆಗೆದಿರುವೆನು. ಅಲ್ಲದೆ, ಸಿಟ್ಟಿನಲ್ಲಿಯೂ ಮತಿಗೆಡಬಾರದೆಂದು ನಾನು ನಿನ್ನಿಂದ ಕಲಿತೆ. ಈಗ ನೀನು ನರಲೋಕಕ್ಕೆ ತೆರಳಿ ನನ್ನ ಚರಣಸನ್ನಿಧಿಗೆ ಬರಬಹುದು. ನೀನು ಮಾತ್ರವಲ್ಲದೆ ನಿನ್ನ ಸಂತಾನ ಪಾರಂಪರ್ಯದವರೆಲ್ಲ ನರಲೋಕದಲ್ಲಿ

ಸ್ವೇಚ್ಛಾನುಸಾರ ವರ್ತಿಸಿದರೂ ಯಮಬಾಧೆಯು ನಿಮಗೆ ತಟ್ಟದಂತೆ ವರವನ್ನಿತ್ತಿರುವೆನು" ಎಂದು ಭಗವಂತನು ನಾರ್ಣಪ್ಪನನ್ನು ಬಿಟ್ಟುಬಿಡುವಂತೆ ದೂತರಿಗೆ ಅನುಮತಿ ಇತ್ತನು.

ಅಂದು ನರಲೋಕಕ್ಕೆ ಬಂದ ನಾರ್ಣಪ್ಪನ ಸಂತತಿಯವರು ಈಗಲೂ ಇರುವರಂತೆ. ಅವರು ಮನಬಂದಂತೆ ವರ್ತಿಸಿದರೂ ಅವರಿಗೆ ಯಮಬಾಧೆಯು ಹಿಡಿಯಲಾರದಂತೆ; ನಂಬಿದರೆ ನಂಬಿ.–ಬಿಟ್ಟರೆ ಬಿಡಿ.

---

೬

# ಚರಂಡಿಯ ಕತೆ

೧

ಧಾರಾಪುರ,
10-7-1943.

ಮ. ರಾ. ಧಾರಾಪುರ ಮುನಿಸಿಪಾಲಿಟಿಯ ಕಮಿಶನರ್ ರವರ ಸನ್ನಿಧಾನಕ್ಕೆ, ಮಾರ್ಕೆಟ್ ವಾರ್ಡಿನ ನಿವಾಸಿಕ ಎ. ಬಿ. ರಾಮಪ್ಪನು ಬರಕೊಂಡ ಅರ್ಜಿ:-

ಅಯ್ಯಾ,

ನನ್ನ ಮನೆಯ (ನಂ. 1137-5ನೇ ಮಾರ್ಕೆಟ್ ವಾರ್ಡ್) ಮುಂದಿರುವ ಮುನ್ಸಿಪಲ್ ಚರಂಡಿಯ ಕೊಳೆಯನ್ನು ಕಳದ 2 ವಾರಗಳಿಂದ ತೆಗೆಯದೇ ಇರುವುದರಿಂದ ಅಲ್ಲಿ ಬಹಳ ಕೆಟ್ಟ ವಾಸನೆಯುಂಟಾಗಿರುತ್ತದೆ. ತಾವು ದಯವಿಟ್ಟು ಚರಂಡಿಯನ್ನು ಪ್ರತಿದಿನ ತೊಳೆಯಿಸುವಂತೆ ಏರ್ಪಾಡು ಮಾಡಬೇಕಾಗಿ ತಮ್ಮಲ್ಲಿ ಅರಿಕೆಮಾಡುತ್ತೇನೆ. ಅಲ್ಲದೆ, ನನ್ನ ಮನೆಯ ಕೆಲವೇ ಮಾರು ದೂರದಲ್ಲಿ, ಚರಂಡಿಯು ಸ್ವಲ್ಪಂಶ ಮಣ್ಣಿನಿಂದ ಮುಚ್ಚಿಹೋಗಿ, ಕೊಳಕು ನೀರು ಹರಿಯಲಿಕ್ಕೂ ತೊಂದರೆಯಾಗಿರುತ್ತದೆ. ಆದ ಕಾರಣ ಕೊಳೆಕಶ್ಮಲಗಳು ಚರಂಡಿಯಲ್ಲೇ ನಿಂತು ನಾರದಂತೆ ಕೂಡಲೇ ಚರಂಡಿಯ ಭಾಗವನ್ನು ದುರುಸ್ತಿಪಡಿಸಬೇಕಾಗಿಯೂ ಪ್ರಾರ್ಥಿಸುತ್ತೇನೆ. ಈ ಕುರಿತು ತಾವು ಕ್ಷಿಪ್ರದಲ್ಲಿಯೇ ನಿಗಾ ತೆಗೆದುಕೊಂಡು ಕೃಪೆದೋರುವಿರೆಂದು ನಂಬಿದ,.

ತಮ್ಮ ವಿಧೇಯ,
(ಸಹಿ) ಎ. ಬಿ. ರಾಮಪ್ಪ.

೨

ಧಾರಾಪುರ,
25-7-43

ಮ. ರಾ. ಧಾರಾಪುರ ಮುನಿಸಿಪಾಲಿಟಿಯ
ಕಮಿಶನ್‌ರವರ ಸನ್ನಿಧಾನಕೆ —

ಅಯ್ಯಾ,

ನಾನು ನನ್ನ ಮನೆಯ ಮುಂದಿನ ಚರಂಡಿ ತೊಳೆಯುವ ಮತ್ತು ದುರಸ್ತಿಯ ಬಗ್ಗೆ ತಮಗೆ ಅರ್ಜಿಮಾಡಿ ಸುಮಾರು 15 ದಿನಗಳಾದವು. ಆದರೂ ಚರಂಡಿಯು ಮುಂಚಿನಂತೆಯೇ ಇದೆ ವಿನಾ ಅದನ್ನು ತೊಳೆಯುವ ಮತ್ತು ದುರಸ್ತಿಮಾಡುವ ಏನೊಂದು ಏರ್ಪಾಡೂ ನಡೆದಿಲ್ಲವೆಂದು ಹೇಳಲು ವ್ಯಸನವಾಗುತ್ತದೆ. ಚರಂಡಿಯಿಂದ ಹೊರಡುವ ದುರ್ವಾಸನೆಯಂತೂ ಸಹಿಸಲಿಕ್ಕೆ ಅಸಾಧ್ಯವಾಗಿದೆ. ಚರಂಡಿ ಮುಚ್ಚಿದ ಕಡೆ, ಕೂಡಲೇ ದುರಸ್ತಿಯಾಗದಿದ್ದರೆ ಅದು ಸಂಪೂರ್ಣ ಮುಚ್ಚಿಹೋಗುವುದರಲ್ಲಿ ಅನುಮಾನವಿಲ್ಲ. ಆದುದರಿಂದ ಇನ್ನಾದರೂ ತ್ವರ್ಯದಲ್ಲಿಯೇ ಹುಕುಂ ದೊರೆಯಬಹುದೆಂದು ಆಶಿಸಬಹುದೇ?

ತಮ್ಮ ವಿಧೇಯ,
(ಸಹಿ) ಎ. ಬಿ. ರಾಮಪ್ಪ.

೩

ಧಾರಾಪುರ,
8-8-43.

ಧಾರಾಪುರ ಮುನ್ಸಿಪಾಲಿಟಿ ಕಮಿಶನರ್‌ರಿಂದ
ವಿಷಯ ನಂ. 379-SN×/6-43.

ತಾ. 10-7-43ರ ಸದ್ರಿ ಅರ್ಜಿಯನ್ನು ಸೆನಿಟೇಶನ್ ಕಮಿಟಿಯ ಅಧ್ಯಕ್ಷರ ಪರಾಂಬರಿಕೆ ಬಗ್ಗೆ ಅವರಿಗೆ ಕಳುಹಿಸೋಣಾಗಿಯದೆ. ಆ ಕುರಿತು ಎಲ್ಲಾ ವ್ಯವಹಾರಗಳನ್ನು ಅವರೊಡನೆಯೇ ಮಾಡುವುದು.

(ಸಹಿ) ಎಸ್. ಶಂಕರ ಮೆನೋನ್, ಕಮಿಶನರ್.

೪

ಧಾರಾಪುರ,
19-8-43.

ಧಾರಾಪುರ ಮುನ್ಸಿಪಾಲಿಟಿಯ ಸೆನಿಟೇಶನ್ ಕಮಿಟಿಯ ಅಧ್ಯಕ್ಷರವರ ಸನ್ನಿಧಾನಕ್ಕೆ—

ಅಯ್ಯಾ,

ನಾನು ಕಳೆದ 10-7-43ರಲ್ಲು ಮಾನ್ಯ ಕಮಿಶನರರಿಗೆ ಮಾಡಿಕೊಂಡ ಅರ್ಜಿಯು ಇತ್ಯರ್ಥ ಬಗ್ಗೆ ತಮಗೆ ಕಳುಹಿಸಲ್ಪಟ್ಟಿದೆಯೆಂದು ಕೇಳುತ್ತೇನೆ. ದಯವಾಡಿ ಆ ಕುರಿತು ತಾವು ಏನು ಹುಕುಂ ದಯಪಾಲಿಸಿರುವಿರೆಂದು ತಿಳಿಸಿದರೆ ಉಪಕಾರವಿತ್ತು.

ಚರಂಡಿಯಾದರೋ ಮತ್ತೂ ಮತ್ತೂ ನಿಕೃಷ್ಟಾವಸ್ಥೆಗೆ ಬರುತ್ತಿದೆಯಲ್ಲದೆ ಕೂಡಲೇ ಆ ಕಡೆ ಗಮನವೀಯದಿದ್ದರೆ ಸಾರ್ವಜನಿಕ ಆರೋಗ್ಯಕ್ಕೇನೆ ಧಕ್ಕೆ ತಗಲಬಹುದೆಂದು ಊಹಿಸುತ್ತೇನೆ.

ತಮ್ಮ ನಮ್ರ,
(ಸಹಿ) ಎ. ಬಿ. ರಾಮಪ್ಪ.

೫

ಧಾರಾಪುರ,
30-9-43.

ಧಾರಾಪುರ ಮುನ್ಸಿಪಾಲಿಟಿಯ ಸೆನಿಟೇಶನ್ ಕಮಿಟಿಯ ಅಧ್ಯಕ್ಷರಿಂದ—

ನಂ. 379 SN/6-43.

ವಿಷಯ ತಾ. 16-8-43ರ ನಂ.........—ಅರ್ಜಿ.

ಸದ್ರಿ ಅರ್ಜಿಯ ಕಡೆಗೆ ಗಮನವೀಯಲಾಗುತ್ತಿದೆ. ಅರ್ಜಿಗೆ ಮರುತ್ತರವನ್ನು ಕ್ರಮಶಃ ಕಳುಹಿಸಲಾಗುವುದು.

(ಸಹಿ) ಕೆ. ರಮಾನಾಥ ರಾವ್.
ಅಧ್ಯಕ್ಷ, ಸೆನಿಟೇಶನ್ ಕಮಿಟಿ.

೬

ಧಾರಾಪುರ,

20-10-43.

ಧಾರಾಪುರ ಮುನ್ಸಿಪಾಲಿಟಿಯ ಸೆನಿಟೇಶನ್ ಕಮಿಟಿಯ

ಅಧ್ಯಕ್ಷರ ಸನ್ನಿಧಾನಕ್ಕೆ –

ಅಯ್ಯಾ,

ನಾನು ತಾ 10-7-43 ರಲ್ಲು ತಮಗೆ ಬರಕೊಂಡ ಅರ್ಜಿಯ ಕುರಿತು ನಿಗಾ ತೆಗೆದುಕೊಳ್ಳಲಾಗುತ್ತಿದೆಯೆಂದೂ ಅದಕ್ಕೆ ಮರುತ್ತರ ವನ್ನು ಕ್ರಮಶಃ ಕಳುಹಿಸುವಿರೆಂದೂ ತಿಳಿಸಿದುದಕ್ಕಾಗಿ ತಮಗೆ ನಾನು ತುಂಬಾ ಅಭಾರಿಯಾಗಿದ್ದೇನೆ.

ತಮ್ಮ ಆಕ್ಷೇಪವಿಲ್ಲದಿದ್ದರೆ, ದಯವಿಟ್ಟು ಆ ಮೇಲಾದರೂ ನನ್ನ ಅರ್ಜಿಯ ಕುರಿತು ಏನು ಹುಕುಂ ಹೊರಟಿದೆಯೆಂದು ತಿಳಿಸುವಿರಾ?

ತಮ್ಮ ನಮ್ರ,

(ಸಹಿ) ಎ. ಬಿ. ರಾಮಪ್ಪ.

೭

ಧಾರಾಪುರ,

10-11-43.

ಧಾರಾಪುರ ಮುನ್ಸಿಪಾಲಿಟಿಯ ಸೆನಿಟೇಶನ್

ಕಮಿಟಿಯ ಅಧ್ಯಕ್ಷರಿಂದ–

ನಂ. 379/SY/6-43.

ವಿಷಯ: – ತಾ. 20-10-43ರ ನಂ.......ರ ಅರ್ಜಿ.

ಸದ್ರಿ ಅರ್ಜಿಯನ್ನು ಸ್ಥಳ ತನಿಖಿ ನಡೆಸಿ ರಿಪೋರ್ಟು ಮಾಡುವ ಬಗ್ಗೆ ಸೆನಿಟರಿ ಇನ್ಸ್‌ಪೆಕ್ಟರರಿಗೆ ಕಳುಹಿಸೋಣಾಗಿಯದೆ. ರಿಪೋರ್ಟು ಬಂದಾಕ್ಷಣ ಕೆಲಸವನ್ನು ಪ್ರಾರಂಭಿಸಲಾಗುವದು.

ಹೊಸ ಚರಂಡಿಯನ್ನು ತೋಡುವ ಕುರಿತು ಪಬ್ಲಿಕ್ ವರ್ಕ್ಸ್ ಕಮಿಟಿಗೆ ಪ್ರತ್ಯೇಕ ಅರ್ಜಿ ಅಗತ್ಯ.

(ಸಹಿ) ಕೆ. ರಮಾನಾಥರಾವ್, ಅಧ್ಯಕ್ಷ,
ಸೆನಿಟೇಶನ್ ಕಮಿಟಿ.

೮

ಧಾರಾಪುರ,
12-11-43.

ಧಾರಾಪುರ ಮುನ್ಸಿಪಾಲಿಟಿಯ ಪಬ್ಲಿಕ್ ವರ್ಕ್ಸ್
ಕಮಿಟಿಯ ಅಧ್ಯಕ್ಷರ ಸನ್ನಿಧಾನಕ್ಕೆ—

ಅಯ್ಯಾ,

ನನಗೂ ಮುನ್ಸಿಪಾಲಿಟಿಯ ಮಾನ್ಯ ಕಮಿಶನರಿಗೂ ಸೆನಿಟೇಶನ್ ಕಮಿಟಿಯ ಅಧ್ಯಕ್ಷರಿಗೂ ನಮ್ಮ ಮನೆಯ ಮುಂದಿನ ಚರಂಡಿಯ ಕುರಿತಾದ ಪತ್ರವ್ಯವಹಾರದ ನಕಲುಗಳನ್ನೆಲ್ಲ ಇದರೊಂದಿಗಿಟ್ಟಿರುತ್ತೇನೆ. ತಾವು ದಯವಿಟ್ಟು ಆ ಪತ್ರಗಳನ್ನು ಓದಿ, ತಮ್ಮ ಅಭಿಪ್ರಾಯವನ್ನು ಸೂಚಿಸುವಂತೆ – ಇಲ್ಲವೇ ಕೆಲಸವನ್ನು ಕೈಕೊಳ್ಳುವ ಏರ್ಪಾಡು ಮಾಡುವಂತೆ ಕೃಪೆದೋರಬೇಕಾಗಿ ವಿನಯದಿಂದ ಅರಿಕೆಮಾಡಿಕೊಳ್ಳುತ್ತೇನೆ.

ತಮ್ಮ ನಮ್ರ,
(ಸಹಿ) ಎ. ಬಿ ರಾಮಪ್ಪ.

೯

ಧಾರಾಪುರ,
29-11-43.

ಧಾರಾಪುರ ಮುನ್ಸಿಪಾಲಿಟಿಯ ಪಬ್ಲಿಕ್
ವರ್ಕ್ಸ್ ಕಮಿಟಿಯ ಅಧ್ಯಕ್ಷರಿಂದ—

ನಂ. 10[illegible]7/PW/43.

ಮೇಲ್ಕಾಣಿಸಿದ 12-11-43ರ ಅರ್ಜಿಯ ಕುರಿತಾಗಿ ಈ ಮೂಲಕ ಅರ್ಜಿದಾರನಿಗೆ ತಿಳಿಯಪಡಿಸುವದೇನಂದರೆ, ಕಂಟ್ರಾಕ್ಟದಾರರಾಗಲು ಇಚ್ಛಿಸುವ ಉಮೇದ್ವಾರರು ತಮ್ಮ ಎಲ್ಲಾ ಅರ್ಜಿಗಳನ್ನು, ಈ ಆಫೀಸಿ

ನಿಂದ ಪಡೆಯೋಣಾಗುವ ನಿಶ್ಚಿತ ಫಾರ್ಮಿನಲ್ಲಿ, ಎರಡು ರೂಪಾಯಿ ಫೀಯೊಂದಿಗೆ ಬರೆದುಕೊಳ್ಳತಕ್ಕದ್ದು.

ಅರ್ಜಿಗಳನ್ನು ಸ್ವೀಕರಿಸುವ ಕೊನೆಯ ತಾರೀಕು 30-12-43 ಅನಂತರ ಬಂದ ಅರ್ಜಿಗಳ ಕಡೆಗೆ ಗಮನವೀಯಲಾಗುವದಿಲ್ಲ.

(ಸಹಿ) ಎ. ಜೋನ್‌ಸಿಕೇರ, ಅಧ್ಯಕ್ಷ. P. W. ಕಮಿಟಿ.

೧೦

ಧಾರಾಪುರ,
29-11-43.

ಧಾರಾಪುರ ಮುನ್ಸಿಪಾಲಿಟಿಯ ಪಬ್ಲಿಕ್
ವರ್ಕ್ಸ್ ಕಮಿಟಿಯ ಅಧ್ಯಕ್ಷರವರ ಸನ್ನಿಧಾನಕ್ಕೆ—

ಅಯ್ಯಾ,

ಮುನ್ಸಿಪಾಲಿಟಿಯ ಕಂಟ್ರಾಕ್ಟದಾರನಾಗಲು ಅನುಸರಿಸಬೇಕಾದ ಕ್ರಮದ ಕುರಿತು ಎಲ್ಲಾ ಮಾಹಿತಿಯನ್ನೂ ಕೊಟ್ಟದಕ್ಕಾಗಿ ನಾನು ತಮಗೆ ಕೃತಜ್ಞನಾಗಿದ್ದೇನೆ. ಆದರೆ ಸದ್ಯ ಅಂತಹ ಗೌರವಕ್ಕೋಸ್ಕರ ನಾನು ಪೇಚಾಡುತ್ತಿಲ್ಲವೆಂದು ಹೇಳ ಬಯಸುತ್ತೇನೆ.

ನಮ್ಮ ಮನೆಯ ಮುಂದಿರುವ ಚರಂಡಿಯ ದುರಸ್ತಿ ಬಗ್ಗೆ ತಾವು ಯಾವ ಏರ್ಪಾಡು ಮಾಡಿರುವಿರೆಂದು ತಿಳಿಸುವಿರಾ?

ತಮ್ಮ ನಮ್ರ,
(ಸಹಿ) ಎ. ಬಿ. ರಾಮಪ್ಪ.

೧೧

ಧಾರಾಪುರ,
10-12-43.

ಧಾರಾಪುರ ಮುನ್ಸಿಪಾಲಿಟಿಯ ಸೆನಿಟೇಶನ್
ಕಮಿಟಿಯ ಅಧ್ಯಕ್ಷರಿಂದ—

ನಂ. 379|3N|6-43

ಸದ್ರಿ ಅರ್ಜಿಯ ಕುರಿತು ತನಿಖಿ ನಡೆದಾಗ, ಸದ್ರಿ ಅರ್ಜಿದಾರನು

ಯಾವಾಗಲೂ ತನ್ನ ಮನೆಯ ಮುಂದಿರುವ ಚರಂಡಿಗೆ ಕಸ-ಕಡ್ಡಿ, ಮಕ್ಕಳ ಮಲಮೂತ್ರಗಳನ್ನು ಬಿಸಾಡಿಸುತ್ತಿರುವನೆಂದೂ, ಕಾರಣವೇ ಚರಂಡಿಯು ಮುಚ್ಚಿಹೋಗಿದೆಯೆಂದೂ ರಿಪೋರ್ಟ್ ಬಂದಿರುತ್ತದೆ.

ಆದುದರಿಂದ ಇದೇ ದಶಂಬರ 20ನೇ ತಾರೀಕಿನ ಒಳಗೆ ಈ ಮುನ್ಸಿಪಾಲಿಟಿಯು ತಾ. 7-2-41ರ ನಂ. 1034ನೇ ನಿರ್ಣಯದಂತೆ ಮಂಜೂರಾದ ಸೆನಿಟೇಶನ್ ನಿಯಮಗಳ 14ನೇ ಕಲಮಿನ ಅನ್ವಯ ಅರ್ಜಿದಾರನ ಮೇಲೆ ಯಾಕೆ ತಕ್ಸೀರು ಮಾಡಬಾರದೆಂದು ಉದಾಹರಣೆ ಕೊಡಬೇಕು. ತಿಳಿದಿರಲಿ.

(ಸಹಿ) ಕೆ. ರಮಾನಾಥ ರಾವ್, ಅಧ್ಯಕ್ಷ,
ಸೆನಿಟೇಶನ್ ಕಮಿಟಿ.

೧೨

ಧಾರಾಪುರ,
25-12-43.

ಧಾರಾಪುರ ಮುನ್ಸಿಪಾಲಿಟಿಯ ಪಬ್ಲಿಕ್ ವರ್ಕ್ಸ್
ಕಮಿಟಿಯ ಅಧ್ಯಕ್ಷರಿಂದ—

ನಂ. 1097/PW/43.

ವಿಷಯ:—10-7-43ರ ಅರ್ಜಿ.

ಈ ವರ್ಷದ ಅಂದಾಜುಪಟ್ಟಿಯಲ್ಲಿ ಹೊಸ ಚರಂಡಿಗಳನ್ನು ತೋಡುವ ಕೆಲಸವನ್ನು ಕೈಕೊಳ್ಳಲು ಸಾಕಷ್ಟು ಹಣದ ಅವಕಾಶವಿಲ್ಲ. ಬರುವ ವರ್ಷದ ಅಂದಾಜು ಪಟ್ಟಿಯಲ್ಲಾದರೂ ಈ ಕೆಲಸದ ಖರ್ಚನ್ನು ಸೇರಿಸುವ ಯೋಚನೆ ಮಾಡುವಂತೆ ಸದ್ರಿ ಅರ್ಜಿಯನ್ನು ಕಮಿಶನರ್ ರವರಿಗೆ ಹಿಂದೆ ಕಳುಹಿಸಲಾಗಿಯದೆ.

(ಸಹಿ) ಎ. ಜೋನ್ ಸಿಕೇರ ಅಧ್ಯಕ್ಷ,
P. W. ಕಮಿಟಿ.

೧೦

# ಎಮ್. ಸಿ.

೧

ಮಂಗಳೂರು,

10-10-1942.

ಪ್ರಿಯಮಿತ್ರ ಸದಾಶಿವ,

ನಿನ್ನ ಕಾಹಿಲೆ ವಾಸಿಯಾಗುತ್ತ ಬಂದಿದೆಯೆಂದು ಕೇಳಿ ನನಗೆ ಸಂತೋಷವಾಯಿತು.

ಶ್ರೀನಿವಾಸನು ಅಷ್ಟು ಪ್ರಯತ್ನ ಮಾಡಿಯೂ ಸೋತುದರಲ್ಲಿ ಆಶ್ಚರ್ಯವೇನೂ ಇಲ್ಲ. ಈ ಕಾಲದಲ್ಲಿ ಯೋಗ್ಯತೆಗೆ ಬೆಲೆಯೆಲ್ಲುಂಟು? ಕೈ ಹಿಡಿದು ಮೇಲಕ್ಕೆಳೆಯ ಬಲ್ಲ ಮಹಾನುಭಾವರಿದ್ದರೆ ತಾನೆ ದೊಡ್ಡ ದೊಡ್ಡ ಉದ್ಯೋಗಗಳು ಸಿಗಬಲ್ಲುವು.

ಇರಲಿ. ಹಾಸ್ಟೆಲ್ ಜೀವನದ ಕುರಿತು ಬರೆಯಬೇಕೆನ್ನುತ್ತಿ, ಏನೆಂದು ಬರೆಯಲಿ? ಹೆಂಡತಿ ಮಕ್ಕಳನ್ನು ಬಿಟ್ಟು ವಾಸಿಸುವುದೆಂದರೆ ಎಂತಹ ಕಠಿನ ಕೆಲಸವೆಂದು ನಿನಗೆ ಈಗ ತಿಳಿಯಲಿಕ್ಕಿಲ್ಲ. ಉಪಾಯವಿಲ್ಲುದುದಕ್ಕೆ ಈಗ ಹಾಗೆ ಮಾಡಬೇಕಾಗಿದೆ. ತುಂಟ ಹುಡುಗರ ನಡುವೆ ಕಾಲಕ್ಷೇಪ ನನ್ನದು. ಈಗಿನ ಹುಡುಗರ ವೇಷಭೂಷಣಗಳೇನು! ದುಂದುಗಾರಿಕೆಯೇನು! ಎಲ್ಲವೂ ನನಗೆ ವಿಚಿತ್ರವಾಗಿ ಕಂಡುಬರುತ್ತದೆ. ಹೆತ್ತವರು ಕಷ್ಟಪಟ್ಟು ಸಂಪಾದಿಸಿ ಕಳುಹಿಸಿಕೊಡುವ ಹಣವನ್ನು ಎಷ್ಟು ಸುಲಭವಾಗಿ ಖರ್ಚುಮಾಡುತ್ತಾರೆ ಗೊತ್ತೇ ಸದಾಶಿವ? ನಾವು ಹಾಸ್ಟೆಲ್ ವಿದ್ಯಾರ್ಥಿಗಳಾಗಿದ್ದಾಗ ಒಂದು ವೇಳೆ ಖರ್ಚುಮಾಡಲು ನಮಗೆ ಮನಸ್ಸಿದ್ದರೂ ಅದಕ್ಕೆ ಅವಕಾಶವಿರಲಿಲ್ಲ. ಈಗಲಾದರೋ ಮನಸ್ಸಿಲ್ಲದಿದ್ದವರಿಗೆ ಮನಸ್ಸನ್ನುಂಟುಮಾಡುವ ದುಂದುಗಾರಿಕೆಯ ಮಾರ್ಗಗಳು ಸಾವಿ

ರಾರಿವೆ ಸಿನೆಮ ಹೊಟೇಲು, ಬೀಡಿ-ಸಿಗರೇಟುಗಳ ಸಾಮ್ರಾಜ್ಯದಲ್ಲಿ ತಮ್ಮನ್ನು ತಾವೇ ಮರೆಯುತ್ತಾರೆ ಇಂದಿನ ಹುಡುಗರು. ಜೀವನವೆಂದರೆ ಮೆತ್ತನೆಯ ಹಾಸಿಗೆಯೆಂದು ಅವರ ಕಲ್ಪನೆ. ಮತ್ತೇನು ಬರೆಯಲಿ?

ಶ್ರೀನಿವಾಸನು ಕ್ಷೇಮವಷ್ಟೆ. ಅವನಿಗೆ ನನ್ನ ನಮಸ್ಕಾರ ತಿಳಿಸು.

ಇತಿ ನಿನ್ನವ,

**ಶಾಂತಾರಾಮ.**

೨

ಮಂಗಳೂರು,

25-10-1942

ಪ್ರಿಯ ಮಿತ್ರ ಸದಾಶಿವ,

ಪುನಃ ಪುನಃ ಹಾಸ್ಟೆಲಿನ ಕುರಿತಾಗಿಯೇ ಬರೆಯಲು ಹೇಳುತ್ತಿಯಲ್ಲ ಏನು ಕಾರಣ? ಇಲ್ಲಿ ಎಂದಿನಂತೆಯೇ ದಿನಗಳು ಹೋಗುತ್ತವೆ. ಹುಡುಗಾಟಿಕೆಯ ತರುಣರ ನಡುವೆಯಿದ್ದು ನಾನೂ ನನ್ನ ಸಂಕಷ್ಟಗಳನ್ನು ಮರೆಯುತಿದ್ದೇನೆ.

ಹುಡುಗರ ವಿಚಾರ ಏನು ಬರೆಯಲಿ? ಅವರಲ್ಲಿ ಎಲ್ಲ ತರದವರೂ ಇದ್ದಾರೆ— ಅಧಿಕ ಪ್ರಸಂಗಿಗಳು, ಸೋಮಾರಿಗಳು, ತುಂಟರು, ದುಂದ್ವುಗಾರರು ಎಲ್ಲರೂ ಇದ್ದಾರೆ. ಬಡಪ್ರಾಣಿಗಳು, ಪುಸ್ತಕ ಹುಳಗಳೂ ಇವೆ. ಆದರೆ ಮೊದಲಿನ ಪಂಗಡದವರೇ ಜಾಸ್ತಿ. ಅದರಲ್ಲೂ ನಮ್ಮ ಹಾಸ್ಟೆಲಲ್ಲಿ ಎಮ್. ಸಿ. ಎಂಬವನೊಬ್ಬ ಲೀಡರ್. ಅವನಿಗೆ ಐದಾರು ಮಂದಿ ಅನುಯಾಯಿಗಳು. ಈ ಪುಂಡರ ಹಾವಳಿಯು ಇತ್ತೀಚೆಗೆ ಬಲವಾಗುತ್ತ ಬಂದಿದೆ. ಹಾಸ್ಟೆಲ್ ವಾರ್ಡನ್ನಿಗೆ ಅವರು ಕೊಡುತ್ತಿರುವ ಉಪಟಳವನ್ನು ಹೇಳಿ ತೀರದು. ನಾನಾಗಿದ್ದರೆ ಕೂಡಲೇ ಆ ವಾರ್ಡನ್ ಪದವಿಗೆ ತಿಲೋದಕವಿತ್ತು ನನ್ನ ದಾರಿ ನಾನು ಹಿಡಿಯುತಿದ್ದೆ.

ಮೊನ್ನೆ ಒಂದು ತಮಾಷೆ ನಡೆಯಿತು, ಸದಾಶಿವ. ವಾರ್ಡನ್ನರು ಎಂದಿನಂತೆ ಬೆಳಗ್ಗೆ ಹಾಸ್ಟೆಲಿಗೆ ಬರುವಾಗ, ಅವರ ಕೋಣೆಯ ಬಾಗಿಲಿಗೆ ಅಗಲವಾದ ಒಂದು ಪೋಸ್ಟರನ್ನು ಯಾರೋ ಹಚ್ಚಿದ್ದರು. ‘ಬರು

ತ್ತಾರೆಃ ಬರುತ್ತಾರೆ' ಜಗದ್ವಿಖ್ಯಾತವಾದ ಎ. ಜಿ. ಸರ್ಕಸ್' ಎಂದಿತ್ತು. ತನಿಖೆ ನಡೆದಾಗ, ಎಮ್. ಸಿ. ಯ ಕಾರುಭಾರೆಂದು ಗೊತ್ತಾಯಿತು. ಇಂತಹ ಎಷ್ಟೋ ಕುಚೋದ್ಯಗಳು ನಮ್ಮಲ್ಲಿ ಪ್ರತಿದಿನವೆಂಬಂತೆ ನಡೆಯುತ್ತವೆ.

ಹೆಚ್ಚಿನ ವಿಚಾರ ಮತ್ತೊಮ್ಮೆ ಬರೆಯುತ್ತೇನೆ.

ಇತಿ ನಿನ್ನವ,

**ಶಾಂತಾರಾಮ.**

೩

ಮಂಗಳೂರು,

10-11-1942.

ಪ್ರಿಯಮಿತ್ರ ಸದಾಶಿವ,

ನಿನ್ನ ಕಾಗದ ತಲ್ಪಿತು. ಹಾಸ್ಟೆಲಿನ ಕುರಿತು ಎಷ್ಟು ಬರೆದರೂ ಬೇಸರವಿಲ್ಲವೆನ್ನುತ್ತಿ. ಹಾಗಾದರೆ, ಪ್ರತಿಸಲ ಹಾಸ್ಟೆಲ್ ಸಮಾಚಾರ ಒಂದಿಷ್ಟು ಬರೆಯಲೆ?

ಕಳೆದ ಸಲ ಎಮ್. ಸಿ. ಯೆಂಬ ಹುಡುಗನ ವಿಚಾರ ಹೇಳಿದ್ದೇನಷ್ಟೆ ವಿಶೇಷ ಸಂಗತಿಯೆಂದರೆ ಅವನೂ ನಿಮ್ಮ ಕುಂದಾಪುರದವನಂತೆ. ಚಂದ್ರಶೇಖರನೆಂದು ಅವನ ಪೂರ್ಣ ಹೆಸರಂತೆ. 'ಎಮ್. ಸಿ.' 'ಎಮ್. ಸಿ. ಎಂದೇ ಹುಡುಗರು ಅವನಿಗಿಟ್ಟ ಗಿಡ್ಡ ಹೆಸರು. ಹುಡುಗ ಏನೋ ಲಕ್ಷಣವಾಗಿದ್ದಾನೆ. ಕಲಿಯುವುದರಲ್ಲೂ ಹಿಂದಿಲ್ಲವಂತೆ. ಆದರೆ ಅವನು ಬೇರೆ ಹುಡುಗರಿಗೆ ಮತ್ತು ವಾರ್ಡನ್ನಿಗೆ ಕೊಡುವ ಉಪದ್ರವವಂತೂ ಹೇಳಿದಷ್ಟಿದೆ.

ನಮ್ಮ ಹಾಸ್ಟೆಲಿನ ವಾರ್ಡನ್, ನೋಡಲಿಕ್ಕೆ ಸರ್ದಾರ್ ವಲ್ಲಭಾಯಿ ಪಟೇಲರಂತಿದ್ದಾರೆ. ಹಾಗೆಯೇ ಗಲ್ಲ ಮೀಸೆ, ಹಣೆ, ಹುಬ್ಬುಗಳು ಇವರದು. ನಿನ್ನೆ ಸಂಜೆ ಎಮ್. ಸಿ. ತನ್ನ ಕೋಣೆಯಲ್ಲೊಂದು ನಾಟಕವಾಡಿದ ಪಟೇಲರ ಭಾವಚಿತ್ರಅನಾವರಣವೆಂಬುದಾಗಿ ಎಲ್ಲರನ್ನು ಒಟ್ಟುಗೂಡಿಸಿದ, ವಾರ್ಡನ್ನರನ್ನೂ ಆಮಂತ್ರಿಸಿ ಚಿತ್ರವನ್ನು ಅನಾವರಣ

ಮಾಡುವಂತೆ ಅವರೊಡನೆ ಕೇಳಿಕೊಂಡ. ಪಾಪದ ವಾರ್ಡನ್ ಒಪ್ಪಿಬಿಟ್ಟರು. ಆದರೆ ಅವರು ಅನಾವರಣದ ಸಮಯದಲ್ಲಿ ವಸ್ತ್ರವನ್ನು ಆಚೆ ಸರಿಸಿದಾಗ ತನ್ನ ಭಾವಚಿತ್ರವನ್ನೇ ಅಲ್ಲಿ ಕಾಣಬೇಕೆ? ಹುಡುಗರೆಲ್ಲ ಖೋ ಎಂದು ನಕ್ಕರು. ಎಮ್. ಸಿ. ಯು. ಹಾಸ್ಟೆಲಿನ ಹಸ್ತಪತ್ರಿಕೆಗೆ ಅಂಟಿಸಿದ್ದ ವಾರ್ಡನ್ನರ ಚಿತ್ರದ ಪ್ರತಿಯನ್ನು ಸಂಪಾದಿಸಿ ಈ ರೀತಿ ಮಾಡಿದ್ದ. ವಾರ್ಡನ್ನರ ಮುಖ ಸಣ್ಣದಾಯಿತಂತೆ.

ಎಮ್. ಸಿ. ಗೆ ತಿಂಗಳಿಗೆ ಸರಾಗವಾಗಿ ಅರುವತ್ತೋ ಎಪ್ಪತ್ತೋ ಬರುತ್ತಿದೆಯಂತೆ. ಅವನು ಒಂದೇ ಒಂದು ಸಿನೆಮ ಬಿಡುವುದಿಲ್ಲ. ಗೆಳೆಯರೊಂದಿಗೆ ಒಮ್ಮೆ ಹೊಟೇಲು ನುಗ್ಗಿದರೆ ಎರಡು–ಮೂರು ರೂಪಾಯಿ ಸುರಿದು ಹೊರಗೆ ಬರುತ್ತಾನೆ. 'ಏನೋ ಚಂದ್ರಶೇಖರ, ಹಣವನ್ನು ಅನಾವ್ಯಯ ಮಾಡುತ್ತಿಯಲ್ಲ'ಎಂದು ಯಾರೋ ಎಚ್ಚರಿಸಿದುದಕ್ಕೆ 'ನಿನ್ನ ಅಪ್ಪನ ಗಂಟು ಹೋಯಿತೇ? ನನ್ನ ಹಣ ನಾನು ವ್ಯಯಿಸುತ್ತೇನೆ.' ಎಂದನಂತೆ. ನೋಡಿದೆಯಾ? ರಕ್ತದ ಬಿಸಿ ಮೈಯಲ್ಲಿರುವಾಗ ಹುಡುಗರಿಗೊಂದೂ ಗೊತ್ತಾಗುವದಿಲ್ಲ. ಗೊತ್ತಾಗುವುದಾದರೂ ಹೇಗೆ?

ನಾನು ಕ್ಷೇಮ ಮನೆಯ ವಿಚಾರ ಬರೆಯುತ್ತಿರು.

ಇತಿ ನಿನ್ನವ,

**ಶಾಂತರಾಮ.**

ಳ

ಮಂಗಳೂರು,
23–11–1942.

ಪ್ರಿಯಮಿತ್ರ ಸದಾಶಿವ,

ನೀನು ಆಫೀಸಿಗೆ ಹೋಗಲು ಪ್ರಾರಂಭ ಮಾಡಿದುದು ಯಾವಾಗ? ಡಾಕ್ಟರರ ಅನುಮತಿಯಿದೆಯಷ್ಟೆ! ಶ್ರೀನಿವಾಸನ ತಮ್ಮನಿಗೆ ಕಳೆದ ಅಗೋಸ್ತು ಚಳವಳದಲ್ಲಿ ಶಿಕ್ಷೆಯಾಯಿತೆಂದು ಕೇಳಿದೆ. ನಿಜವೇ? ನೀನೇಕೆ ನನಗೆ ಆ ಕುರಿತು ಬರೆಯಲಿಲ್ಲ?

ಹಾಸ್ಟೆಲ್ ಹುಡುಗರ ಜೀವನ ಎಂದಿನಂತೆಯೇ ಸಾಗುತ್ತಿದೆ.

ಈಗೀಗ ಪುಂಡಾಟಿಕೆಯು ತುಸು ಕಡಿಮೆಯಾಗಿದೆ. ಪರೀಕ್ಷೆ ಬಂತೆಂದೋ ಏನೋ ಎಲ್ಲರೂ ಸಮ್ಮನಿದ್ದಾರೆ. ಎಮ್. ಸಿ.ಗೆ ಮನಸಿದ್ದರೂ ಅವ ನನ್ನು ಹುರಿದುಂಬಿಸುವವರಿಗೆ ಬಿಡುವಿಲ್ಲ. ರಾತ್ರಿಹಗಲೆನ್ನದೆ ಎಲ್ಲರೂ ಓದುತ್ತಿದ್ದಾರೆ. ಚಹಾದೇವಿಯ ಪ್ರತಾಪ ಬಹಳ ನಡೆಯುತ್ತಿದೆ. ಎಮ್. ಸಿ.ಯು ಮಾತ್ರ ಮುಂಚಿನಂತೆಯೇ ಕಾಲಹರಣ ಮಾಡುತಿದ್ದಾನೆ.

ನನಗೂ ವಿರಾಮವೆಂದಿಲ್ಲ. ದಶಂಬರ ಪರೀಕ್ಷೆಯ ಪ್ರಶ್ನಪತ್ರಗಳು ತಯಾರಾಗಬೇಕು. ನಿನ್ನೆಯಿಂದ ಅದೇ ಕೆಲಸದಲ್ಲಿದ್ದೇನೆ.

ರಜೆಯಲ್ಲಿ ಪುತ್ತೂರತ್ತ ಬರಬಹುದಲ್ಲ! ನಿನಗೆ ನಮ್ಮಲ್ಲಿ ಸದಾ ಸ್ವಾಗತವಿದೆ. ಪ್ರೀತಿಯಿರಲಿ.

ಇತಿ ನಿನ್ನವ,

**ಶಾಂತಾರಾಮು.**

೫

ಮಂಗಳೂರು,
8—1—1943

ಪ್ರಿಯಮಿತ್ರ ಸದಾಶಿವ,

ನಮ್ಮ ಶಾಲೆ ಪ್ರಾರಂಭವಾಗಿ ಮೂರು ದಿನಗಳಾದುವು. ಆದರೂ ಹಾಸ್ಟೆಲಿಗೆ ಇನ್ನೂ ಅನೇಕರು ಬಂದಿಲ್ಲ. ಎಲ್ಲರಿಗೂ ಹದಿನೈದು ದಿನಗಳ ರಜೆಯಾದರೆ ಹಾಸ್ಟೆಲ್ ವಿದ್ಯಾರ್ಥಿಗಳು ಐದಾರು ದಿನ ತಾವೇ ರಜೆ ಮಾಡಿಕೊಳ್ಳುತ್ತಾರೆ.

ಬೇರಾರಿಲ್ಲದಿದ್ದರೂ ಎಮ್. ಸಿ.ಯು ಹಾಜರಿದ್ದಾನೆ. ಅವನ ಲೇಟೆಸ್ಟ್ ತುಂಟತನವನ್ನು ಕೇಳಿದರೆ, ನೀನು ನಕ್ಕುನಕ್ಕು ಹೊರಳಾಡುವೆ. ಆದಕಾರಣ ಅದನ್ನಿಲ್ಲಿ ವಿವರವಾಗಿ ವರ್ಣಿಸಿದ್ದೇನೆ.

ನಮ್ಮ ಹಾಸ್ಟೆಲಲ್ಲಿ ಶೇಷಗಿರಿ ಎಂಬ ಮತ್ತೊಬ್ಬ ಹುಡುಗನಿದ್ದಾನೆ, ಕಾರ್ಕಳದವನಂತೆ. ಇಂಟರ್‌ನಲ್ಲಿ ಕಲಿಯುತಿದ್ದಾನೆ. ತಂದೆಗೆ ಒಬ್ಬನೇ ಮಗನೆಂದು ಯಾರೋ ಹೇಳಿದರು. ಮನೆಯಲ್ಲಿ ಹೇರಳ ಆಸ್ತಿಯೂ ಇದೆಯಂತೆ. ಆಗರೆ ಶೇಷಗಿರಿಯು ಕಾಸಿಗೆ ಕಾಸು ಗಂಟು ಹಾಕಿ,

ಹೊಟ್ಟೆಗೆ ಬೆನ್ನು ಅಂಟುಹಾಕುವ ಮನೋವೃತ್ತಿಯವನು. ಅವನು ಹೊಟೇಲಿಗೆ ಹೋಗುವುದೇ ಇಲ್ಲ. ಬೇರೆಯವರಿಂದ ಪುಸ್ತಕಗಳನ್ನು ಎರವಾಗಿ ಪಡೆದು ಓದಿಯೇ ವಿದ್ಯಾಭ್ಯಾಸಮಾಡುತಿದ್ದಾನೆ.

ಮತ್ತೊಂದು ವಿಷಯವೆಂದರೆ, ಶೇಷಗಿರಿಯು ಯಾರೊಡನೆಯೂ ಮಾತನಾಡುವ ಜಾತಿಯಲ್ಲ. ಹಾಸ್ಟೆಲಲ್ಲಿ ಯಾರಿಗಾದರೂ ಮನೆಯಿಂದ ತಿಂಡಿ ತಿನಸುಗಳು ಬಂದರೆ, ಅವರು ಆ ತಿಂಡಿ ಹಂಚುವಲ್ಲಿ ಶೇಷಗಿರಿಯು ತಪ್ಪದೆ ಹಾಜರಿರುತ್ತಾನೆ. ಅವನಿಗೆ ಬಂದರೆ ಮಾತ್ರ ಯಾರಿಗೂ ಹೇಳದೆ ಗುಟ್ಟಿನಲ್ಲಿ ತಾನೊಬ್ಬನೇ ತಿಂದು ಬಿಡುತ್ತಾನೆ. ರೂಮಿನಲ್ಲಿರುವವನಿಗೂ ಅದು ಸಿಗಲಾರದಂತೆ.

ಮೊನ್ನೆ ಊರಿನಿಂದ ಬರುವಾಗಲೂ ಶೇಷಗಿರಿಯು ಒಂದು ಮಿಠಾಯಿಡಬ್ಬಿಯನ್ನು ತಂದಿದ್ದ. ಗೆಳೆಯರು ಅದರಲ್ಲೇನಿದೆಯೆಂದು ಕೇಳಿದಾಗ 'ಮತ್ತೇನಿಲ್ಲ. ಒಂದಿಷ್ಟು ಅರಿವೆ' ಯೆಂದಿದ್ದ. ಆದರೆ ಎಲ್ಲರಿಗೂ ಅನುಮಾನವಿದ್ದೇ ಇತ್ತು. ಎಮ್. ಸಿ.ಗೂ ಅದು ಗೊತ್ತಾಯಿತು. ಅವನು ಶೇಷಗಿರಿ ಕೋಣೆಯಲ್ಲಿಲ್ಲದ ಹೊತ್ತು ನೋಡಿ, ಕೋಣೆಯನ್ನು ಹೊಕ್ಕು, ಡಬ್ಬಿಯ ಬೀಗ ತೆಗೆದು ನೋಡಿದ. ಮಿಠಾಯಿ ಲಾಡು, ಸಿಹಿಗೇರುಬೀಜ, ಹಲ್ವ-ಇವಿಷ್ಟು ಬಗೆ ಆದರಲ್ಲಿದ್ದುವಂತೆ. ಎಮ್. ಸಿ. ಯು ಧೈರ್ಯದಿಂದ ಎಲ್ಲವನ್ನು ಹೊರತೆಗೆದು ತಾನೂ ತಿಂದು ಬೇರೆಯವರಿಗೂ ತಿನಿಸಿದನಂತೆ. ಮತ್ತು ಡಬ್ಬಿಯಲ್ಲಿ ಶೇಷಗಿರಿಯ ಬಾತ್‌ಟವೆಲ್ ಮತ್ತು ಕರವಸ್ತ್ರಗಳನ್ನು ತುಂಬಿಸಿಟ್ಟು ಹೊರಟುಹೋದ.

ಶೇಷಗಿರಿಯು ಸಾಯಂಕಾಲ ಹಿಂದೆ ಬಂದು ಬಾಯಲ್ಲಿ ನೀರಿಳಿಸುತ್ತಾ ಡಬ್ಬಿಯ ಬಾಗಿಲು ತೆರೆದಾಗ ಅವನಿಗೇನಾಗಿರಬಹುದೆಂದು ನೀನೇ ಊಹಿಸಬಲ್ಲೆ. ಶೇಷಗಿರಿಯು ಮೆಲ್ಲಗೆ ತನ್ನ ಜತೆಯವನೊಂದಿಗೆ 'ಡಬ್ಬಿಯನ್ನಾರಾದರೂ ತೆರೆದರೆ?' ಎಂದು ಕೇಳಿದನಂತೆ. ಅದಕ್ಕೆ ಜತೆಯವನು, 'ಯಾಕೆ? ವಸ್ತ್ರ ಕಳವಾಗಿದೆಯೆ?' ಎಂದನಂತೆ. ಶೇಷಗಿರಿಯು ಮೋರೆ ಸಣ್ಣದು ಮಾಡಿ 'ಇಲ್ಲ, ಏನಿಲ್ಲ' ಎಂದು ಸುಮ್ಮಗಾದನಂತೆ. ನೋಡಿದೆಯಾ ಎಮ್. ಸಿ.ಯ ಪ್ರತಾಪ! ಇಂತಹ ಮೆದುಳನ್ನು ಲಂಡನಿಗೆ ಕಳುಹಿಸಿಕೊಡಬೇಕು ನೋಡು.

ಅದೃಷ್ಟವಶಾತ್ ಎಮ್. ಸಿ.ಯು ನನ್ನ ಗೋಜಿಗೆ ಬಾರದಿದ್ದುದು ನನ್ನ ಪುಣ್ಯವೆಂದು ನಾನೆಣಿಸುತ್ತೇನೆ.

ರಜೆಯಲ್ಲಿ ನಿನಗೆ ಕಾಗದ ಬರೆಯಲಿಕ್ಕೇನೆ ಆಗಲಿಲ್ಲ. ನೀನು ಕ್ಷೇಮವಷ್ಟೆ!

ಇತಿ ನಿನ್ನವ.

**ಶಾಂತಾರಾಮ.**

೬

ಮಂಗಳೂರು,

22-1-1943

ಪ್ರಿಯಮಿತ್ರ ಸದಾಶಿವ,

ಸಿಕೇರರಿಗೆ ವರ್ಗವಾದುದು ನಿನಗೆ ಹಿತಕರವೆಂದೇ ಭಾವಿಸುತ್ತೇನೆ. ಬರುವ ಪುಣ್ಯಾತ್ಮನಾರು? 'ಬಾಣಲೆಯಿಂದ ಬೆಂಕಿಗೆ' ಎಂಬಂತೆ ಆಗಲಿಕ್ಕಿಲ್ಲವಷ್ಟೆ! ಇನ್ನಾದರೂ ನಿನಗೆ ಸ್ವಲ್ಪ ಬಿಡುವು ದೊರೆತೀತೆಂದು ನಂಬುತ್ತೇನೆ.

ನಮ್ಮ ಶಾಲೆಯ ವರ್ಧಂತಿಯು ಬರುವ ತಿಂಗಳಲ್ಲಿ ಜರಗಲಿರುವುದು. ನಾನೂ ಕೆಲವು ಹುಡುಗರನ್ನು ಒಂದು ನಾಟಕಕ್ಕೆ ತರಬೇತು ಮಾಡುತಿದ್ದೇನೆ. ಹೇಗಾಗುವುದೋ ನೋಡಬೇಕು. ತರಬೇತಿಗೆ ಸರಿಯಾಗಿ ಹುಡುಗರು ಬರುವುದಿಲ್ಲ. ಅವರ ಪುರುಸೊತ್ತಿನಂತೆ ನಾನು ಕುಣಿಯಬೇಕು. ಕಾಲವೇ ಅಂತಹದು.

ಹಾಸ್ಟೆಲಿನ ಹುಡುಗರೂ 'ಹಾಸ್ಟೆಲ್ ಡೇ'ಗೆ ತಯಾರುಮಾಡುತಿದ್ದಾರೆ. ಎಮ್. ಸಿ.ಯ ವಿಚಾರ ಕೇಳಿಕೇಳಿ ನಿನಗೆ ಬೇಸರಬಾರದಿದ್ದುದಕ್ಕೆ ಸರಿಯಾಗಿ ಅವನೂ ಹೊಸಹೊಸ ಕತೆಗಳಿಗೆ ಸಾಮಾಗ್ರಿಯನ್ನೊದಗಿಸುತ್ತಾನೆ.

ಕಳೆದ ಗುರುವಾರ ಎಮ್. ಸಿ.ಗೆ ಹುಚ್ಚು ಹಿಡಿಯಿತೆಂದು ಕೇಳಿದೊಡನೆ ನಿನಗೆ ಆಶ್ಚರ್ಯವಾಗಬಹುದು. ಹಾಸ್ಟೆಲಲ್ಲಂತೂ ಆ ದಿನ ಗಲಾಟೆಯೇ ಗಲಾಟೆ. ಎಲ್ಲರಿಗೂ ಆ ದಿನ ರಜೆಯಿತ್ತು. ಎಮ್. ಸಿ.

ಏನು ಮಾಡಿದ ಗೊತ್ತೇ? ಬೆಳಗ್ಗೆ ಎದ್ದವನೇ ಕಂಡಾಬಟ್ಟೆ ಮಾತನಾಡು ತಿದ್ದ. ಅರಚುವುದು, ಕಿರಿಚುವುದು, ಹೊಲಸು ಮಾತನಾಡುವುದು ಮುಂತಾಗಿ ನಾನಾ ರೀತಿಯಲ್ಲಿ ಎಲ್ಲರಿಗೂ ಉಪದ್ರವ ಕೊಡುತಿದ್ದ. ಅವನ ಸಂಗಾತಿಗಳು ಅವನೊಡನೆಯೇ ಇದ್ದುಕೊಂಡು, ಬೇರೆಯವರ ಜೀವಕ್ಕೆಲ್ಲಾದರೂ ಅಪಾಯಬಾರದಂತೆ ನೋಡಿಕೊಂಡಿದ್ದರು.ಸುಮಾರು ಹನ್ನೊಂದು ಗಂಟೆಯ ಹೊತ್ತಿಗೆ ಎಮ್. ಸಿ.ಯು ತನಗೆ ತೈಲಾಭ್ಯಂಗ ವಾಗಬೇಕೆಂದು ಹಠಹಿಡಿದ. ಅವನಿಗೆ ಎಣ್ಣೆಯನ್ನು ತಂದುಕೊಟ್ಟು ಅದನ್ನು ಮೈಗೆ ಪೂಸಿಯೂ ಆಯಿತು. ಜೊಬ್ಬೆ ಹಾಕುತ್ತ ಅವನು ಬಚ್ಚಲುಕೋಣೆಯ ಕಡೆಗೆ ಓಡಿದ. ಒಂದು ಮಣ್ಣಿನ ಹೂಜಿಯನ್ನು ನೆಲಕ್ಕೊಗೆದು ಪುಡಿಪುಡಿ ಮಾಡಿಬಿಟ್ಟ. ಹಾಸ್ಟೆಲಿನ ಲಾಂದ್ರವನ್ನು ಉಪ್ಪರಿಗೆಯಿಂದ ಕೆಳಕ್ಕೆಸೆದು ಚೂರುಚೂರು ಮಾಡಿದ. ಹುಚ್ಚು ಎಷ್ಟಕ್ಕೆ ಮಿಾರಿತೆಂದರೆ ಸಂಗಾತಿಗಳಲ್ಲಿ ಯಾರ ಹಿಡಿತಕ್ಕೂ ಅವನು ಸಿಗು ವಂತೆ ತೋರಲಿಲ್ಲ. ನಾವೆಲ್ಲ ಈ ವರ್ತಮಾನವನ್ನು ಅವನ ಮನೆಯವ ರಿಗೆ ತಿಳಿಸೋಣವೆಂದು ಯೋಚಿಸಿದೆವು. ತಂತಿ ಕೊಡೋಣ ಎಂದಿದ್ದಾಗ ಎಮ್. ಸಿ.ಯ ಗೆಳೆಯರು 'ಸ್ವಲ್ಪ ತಾಳಿ, ಸಾಯಂಕಾಲದ ವರೆಗೆ ನೋಡೋಣ. ಅಷ್ಟರಲ್ಲಿ ಹುಚ್ಚು ಶಮನವಾದರೆ ಸುಮ್ಮನೆ ಅವನ ತಂದೆ ತಾಯ್ಗಳನ್ನು ಗಾಬರಿಗೊಳಿಸಿದಂತಾಗುವುದಲ್ಲವೆ?' ಎಂದರು. ಆದರೆ ಎಮ್. ಸಿ.ಯ ತಲೆಗೇರಿದ ಹುಚ್ಚು ಇಳಿಯಲೇ ಇಲ್ಲ. ಅವನು ಊಟದ ಕೋಣೆಗೆ ನುಗ್ಗಿ ಅಡಿಗೆಯವನೊಡನೆ ತನಗೆ ಬಡಿಸಲು ಹೇಳಿದ. ಮರು ಕ್ಷಣದಲ್ಲಿಯೇ ಬಡಿಸಲಿಲ್ಲವೆಂದು ಸಿಟ್ಟಾಗಿ ತನ್ನಮುಷ್ಠಿಯಿಂದಲೇ ಪಾಪದ ಆ ಅಡಿಗೆಯವನಿಗೆ ಹೊಡೆದುಬಿಟ್ಟ. ಅಡಿಗೆಯವನೂ ಪ್ರಾಯದ ವ್ಯಕ್ತಿ. ಎಮ್. ಸಿ.ಯೊಟ್ಟಿಗೆ ಅವನ ಗೆಳೆಯರಿರದಿದ್ದರೆ ಅವನೂ ಒಂದು ಕೈ ನೋಡಿಯೇ ಬಿಡುತಿದ್ದ. ಹಾಸ್ಟೆಲಲ್ಲಿ ಕೊಲೆಯಾದೀತೆಂದು ನಾವೆಲ್ಲ ಹೆದರಿದೆವು. ಅಡಿಗೆಯವನಿಗೆ ಸುಮ್ಮನಿರುವಂತೆ ಹೇಳಿದೆವು. ಅವನು ಮುಷ್ಠಿಯಿಂದ ಐದಾರು ಬಲವಾದ ಪೆಟ್ಟುಗಳನ್ನು ತಿನ್ನಬೇಕಾಯಿತು. ಅಷ್ಟರಲ್ಲಿ ಎಮ್. ಸಿ.ಯನ್ನು ಬಿಡಿಸಿ, ಎಳೆದುಕೊಂಡು ಅವನ ಕೋಣೆಗೆ ಕೊಂಡೊಯ್ದರು. ಬಿಸಿನೀರ ಸ್ನಾನವೂ ಆಯಿತು. ಇಡೀ ದಿನ ಅವನಿಗೆ

ಊಟವಿರಲಿಲ್ಲವೆಂದು ತೋರುತ್ತೆ. ಸಾಯಂಕಾಲವಾದರೂ ಹುಚ್ಚು ಇಳಿಮುಖವಾಗುವಂತೆ ತೋರಲಿಲ್ಲ.

ಈ ವರ್ತಮಾನವನ್ನೆಲ್ಲ ಕೇಳಿ ನಮ್ಮ ಹಾಸ್ಟೆಲ್ ಸುಪರಿಂಟೆಂಡೆಂಟರು ಆ ದಿನ ಸಂಜೆ ನಮ್ಮಲ್ಲಿಗೆ ಬಂದರು. ಅವರನ್ನು ಕಂಡಾಗಲೂ ಎಮ್. ಸಿ.ಯು ದುರದುರನೆ ಅವರನ್ನೇ ನೋಡಿ 'ನಿನಗೇನು ಬೇಕು. ನಡೆ ಇಲ್ಲಿಂದ' ಎಂದು ಗದರಿಸಿದ. ಅವರು 'ನಾಳೆ ಬೇಗ್ಗೆ ಮನೆಯವರಿಗೊಂದು ತಂತಿ ಬಿಡಿ. ಅಷ್ಟರ ತನಕ ಎಲ್ಲಿಗೂ ಹೊರಹೋಗದಂತೆ ಎಚ್ಚರಿರಿ." ಎಂದು ಹೇಳಿ ಹೊರಟುಹೋದರು.

ಆದರೆ ಮರುದಿನ ಮುಂಜಾನೆ ಎಮ್. ಸಿ.ಯು ಸಂಪೂರ್ಣ ಹುಷಾರಿದ್ದ. ಕೋಣೆಯ ಹೊರಗೆ ಬಾರದೆ ಅಲ್ಲೇ ಇದ್ದು ತಿಂಡಿ ತಿನಸುಗಳನ್ನು ತರಿಸಿ ತಿನ್ನುತಿದ್ದ. ಮತ್ತೆಲ್ಲಾ ವಿಚಾರಿಸಿದರೆ, ಅವನು ಮಾಡಿದುದೆಲ್ಲ ಬರೇ ನಟನೆಯಂತೆ. ಅವನ ಆಪ್ತಮಿತ್ರ ಕಿಟ್ಟುವು ನನ್ನೊಡನೆ ಗುಟ್ಟಿನಲ್ಲಿಂದ 'ಹುಚ್ಚೆಲ್ಲ ಸುಳ್ಳು ಸರ್. ಅವನಿಗೆ ಅಡಿಗೆಯವನ ಮೇಲೆ ತುಂಬಾ ದ್ವೇಷವಿತ್ತು. ಅವನಿಗೊಮ್ಮೆ ಬುದ್ಧಿ ಕಲಿಸಬೇಕೇಂದೇ ನಮ್ಮೆಲ್ಲರಿಗೆ ತಿಳಿಸಿ ಈ ಪ್ಲಾನ್ ಮಾಡಿದ. ದಯವಿಟ್ಟು ಯಾರೊಡನೆಯೂ ಇದರ ಪ್ರಸ್ತಾಪವೆತ್ತಬೇಡಿ"ಎಂಬುದಾಗಿ ಅವನು ಹೇಳಿದ.

ಆದರೆ ಈಗಲೂ ಹಾಸ್ಟೆಲಿನ ಹಲವು ವಿದ್ಯಾರ್ಥಿಗಳು ಎಸ್. ಸಿ.ಗೆ ನಿಜವಾಗಿ ಹುಚ್ಚು ಹಿಡಿದಿತ್ತು ಎಂದು ನಂಬುತ್ತಾರೆ. ಅವನೂ ಆಗಾಗ ಸ್ವಲ್ಪ ಸ್ವಲ್ಪ ಹುಚ್ಚು ಮಾತನಾಡುತ್ತಾ ಆ ನಂಬಿಕೆಯನ್ನು ಬೆಳೆಯಬಿಟ್ಟಿದ್ದಾನೆ.

ಹೇಗಿದೆ ಕತೆ? ಹೆಚ್ಚಿನ ವಿಚಾರ ಇನ್ನೊಮ್ಮೆ.

ಇತಿ ನಿನ್ನವ,

**ಶಾಂತಾರಾಮು.**

೭

ಮಂಗಳೂರು,

30-1-1943.

ಪ್ರಿಯ ಮಿತ್ರ ಸದಾಶಿವ,

'ಹಾಸ್ಟೆಲ್ ಡೇ' ಸನ್ನಾಹಗಳು ಭರದಿಂದ ಸಾಗುತ್ತಿವೆ. ಹುಡುಗರೆಲ್ಲ ಅದೇ ಚಿಂತೆಯಲ್ಲಿದ್ದಾರೆ.

ಒಂದೆರಡು ದಿನಗಳಿಂದ ನನಗೆ ಸ್ವಲ್ಪ ಜ್ವರವಿತ್ತು. ಈಗ ಹುಷಾರಿದ್ದೇನೆ. ಶಾಲೆಗೂ ಹೊಗುತಿದ್ದೇನೆ.

ಕಳೆದ ಸಲ ಎಮ್. ಸಿ.ಗೆ ಹುಚ್ಚುಹಿಡಿದ ಕತೆಯನ್ನು ಬರೆದಿದ್ದೆನಷ್ಟೆ! ಅದು ಅವನ ತುಂಟತನದ ಕತೆಯಾಯಿತು. ಆದರೆ ಎಮ್. ಸಿ. ಯ ನಡತೆಯ ಕುರಿತಾಗಿಯೇ ಕೆಲವು ದಿನಗಳಿಂದ ಹುಡುಗರಿಗೆಲ್ಲ ಸಂದೇಹ ಹುಟ್ಟಿರುತ್ತದೆ. ಅವನು ಪ್ರತಿದಿನ ರಾತ್ರಿ ಹಾಸ್ಟೆಲಿಗೆ ಬರುವಾಗ ಒಂಭತ್ತು ಹತ್ತು ಆಗುವುದುಂಟು. ಅಷ್ಟು ಹೊತ್ತಿನವರೆಗೂ ಓಣಿ ಓಣಿಗಳಲ್ಲಿ ಅಲೆಯುತ್ತಾ ಇರುವನೆಂದು ಯಾರೋ ಹೇಳಿದರು. ಹೆತ್ತವರು ತಮ್ಮ ಮಕ್ಕಳ ಕುರಿತು ಎಚ್ಚರಿರದಿದ್ದರೆ ಆಗುವ ಅವಸ್ಥೆಯೇ ಇಷ್ಟು. ಕೋಪಿಸಬೇಡ, ಸದಾಶಿವ. ದೊಡ್ಡವರ ಮಕ್ಕಳು ಏನು ಮಾಡಿದರೂ ಚಂದ. ಬೇರೆ ಯಾರಾದರೂ ಹೀಗೆ ಮಾಡಿದ್ದರೆ ಅವನನ್ನು ಕೂಡಲೇ ಹಾಸ್ಟೆಲಿನ ಹೊರಹಾಕುತಿದ್ದರು. ಎಮ್. ಸಿ.ಗೆ ಮನೆಯಲ್ಲಂತೂ ಕೇಳುವವರಿಲ್ಲವೆಂದು ತೋರುತ್ತೆ. ಹಾಸ್ಟೆಲಲ್ಲಿಯೂ ಅವನಿಗೆ ಸ್ವಾತಂತ್ರ್ಯ ಸಿಕ್ಕಿದೆ. ಪರಿಸ್ಥಿತಿಯು ಎಲ್ಲಿಯ ತನಕ ಮುಟ್ಟಿದೆಯೆಂದರೆ, ಕೆಲವು ವೇಳೆ ಅವನು ಯಾವಳೋ ಒಬ್ಬ ಹುಡುಗಿಯನ್ನು ತನ್ನ ಕೋಣೆಗೆ ಬರಮಾಡಿಸುತಿದ್ದಾನೆಂದು ಹುಡುಗರು ತಮ್ಮ ತಮ್ಮೊಳಗೆ ಮಾತನಾಡಿಕೊಳ್ಳುತಿದ್ದಾರೆ. ಒಂದೆರಡು ಸಲ ಅವನ ಕೋಣೆಯಲ್ಲಿ ಹೆಣ್ಣಿನ ಆಕೃತಿಯನ್ನು ಕಂಡವರೂ ಇದೆಯಂತೆ. ನಾನೇನೂ ಹಾಗೆ ಕಂಡಿಲ್ಲ. ಆದರೆ ಸಂಗತಿಯು ನಿಜವಾಗಿರಲೂ ಬಹುದು. ಎಮ್. ಸಿ.ಯು ಕೆಲವು ದಿನಗಳಿಂದ ಮೂಲೆಯ ಕೋಣೆಯನ್ನು ಆರಿಸಿದುದು, ಇಬ್ಬರಿರುವ ಕೋಣೆಯಲ್ಲಿ

ಇಮ್ಮಡಿ ಬಾಡಿಗೆ ಕೊಟ್ಟು ಒಬ್ಬನೇ ಇರಲು ಬಯಸಿದುದು, ಇವೆಲ್ಲ ಸಂದೇಹಕ್ಕೆ ಅವಕಾಶವೀಯುತ್ತವೆ.

ಹುಡುಗನು ಹೀಗೆ ಕೆಟ್ಟ ಹಾದಿ ಹಿಡಿಯುತ್ತಿರುವುದನ್ನು ಕಂಡು ಎಲ್ಲರಿಗೂ ಬೇಸರವಾಗಿದೆ. ಎಮ್. ಸಿ. ಯ ಹೆತ್ತವರ ಪರಿಚಯ ನಿನಗಿದ್ದರೆ ನೀನಾದರೂ ಒಂದಿಷ್ಟು ಅವರಿಗೆ ಹೇಳಬಾರದೇ?

ಹೆಚ್ಚಿಗೆ ಬರೆಯಲು ಸಮಯವಿಲ್ಲ. ನಾನು ಕ್ಷೇಮ.

ಇತಿ ನಿನ್ನವ,

**ಶಾಂತಾರಾಮ.**

೮

ಮಂಗಳೂರು,

9-2-1943.

ಪ್ರಿಯ ಮಿತ್ರ ಸದಾಶಿವ,

ನಿನ್ನ ಕಾಗದ ತಲ್ಪಿ ಅಭಿಪ್ರಾಯವಾಯಿತು. ಒಂದು ದೃಷ್ಟಿಯಲ್ಲಿ ನೀನು ಹೇಳುವುದು ನಿಜ. ತಮ್ಮ ಮಕ್ಕಳ ಕುರಿತು ದೂರು ಕೇಳುವುದೆಂದರೆ ಯಾರಿಗೂ ಹಿತವೆನಿಸುವುದಿಲ್ಲ. ತನ್ನ ಮರಿ ಹೊನ್ನ ಮರಿಯಷ್ಟೆ! ಮಕ್ಕಳ ಕುರಿತು ಏನಾದರೂ ಹೇಳಿದರೆ ಯಾರ ಹಿತಕ್ಕಾಗಿ ಹೇಳುತಿದ್ದಾರೆಂದು ಯೋಚಿಸುವ ಹೆತ್ತವರೇ ವಿರಳ. ದೊಡ್ಡವರ ವಿಷಯ ಮತ್ತೆ ಕೇಳಬೇಕೇ?

ಎಮ್. ಸಿ.ಯ ದುರ್ನಡತೆಯ ವಿಚಾರ ಕಳೆದಸಲ ಬರೆದಿದ್ದೆ ನಿಜ. ಆದರೆ ಅವನ ಕುರಿತು ಎಲ್ಲವೂ ಒಂದು ದೊಡ್ಡ ಸಮಸ್ಯೆಯಾಗಿ ಬಿಟ್ಟಿದೆ. ನಿನ್ನೆ ಮತ್ತೊಂದು ತಮಾಷೆ ನಡೆಯಿತು. ರಾತ್ರಿ ಸುಮಾರು ಹನ್ನೊಂದು ಗಂಟೆಗೆ ಎಮ್. ಸಿ.ಯ ಕೋಣೆಯ ಬಾಗಿಲು ಮುಚ್ಚಿತ್ತು. ಪಕ್ಕದ ಒಂದು ಕಿಟಕಿಯೂ ಸಂಪೂರ್ಣ ಮುಚ್ಚಿದ್ದು, ಮತ್ತೊಂದು ಕಿಟಕಿಯು ಅರ್ಧ ಪಾತ್ರ ತೆರೆದಿತ್ತು. ಹೊರಗೆ ಬಂದಿದ್ದ ಆಚೆ ಕೋಣೆಯ ಪದ್ಮನಾಭ ಎಮ್. ಸಿ. ಯ ಕೋಣೆಯೊಳಗೆ ಇಣಿಕಿ ನೋಡಿದಾಗ ಒಂದು ವಿಚಿತ್ರ ದೃಶ್ಯವನ್ನು ಕಂಡ. ಕಿಟಕಿಯ ಕಡೆಗೆ ಬೆನ್ನು ಮಾಡಿ ಸುಂದರ

ವಾದ ಪತ್ತಲವನ್ನು ಧರಿಸಿ ಒಬ್ಬ ಹುಡುಗಿಯು ಕುಳಿತಿದ್ದಾಳೆ. ಪಕ್ಕದಲ್ಲೇ ಎಮ್. ಸಿ. ಯು ಕುಳಿತುಕೊಂಡು ಅವಳ ಕೈಗಳನ್ನು ತನ್ನ ಕೈಗಳಲ್ಲಿ ಹಿಡಿದು ಆಡಿಸುತ್ತ ಸಲ್ಲಾಪವಾಡುತ್ತಿದ್ದಾನೆ. ಪದ್ಮನಾಭ ಇದನ್ನೆಲ್ಲ ಕಂಡು ಬೆರಗಾದ. ಸ್ವಲ್ಪ ಹೊತ್ತು ಹಾಗೆಯೇ ನೋಡುತಿದ್ದು ಅನಂತರ ಮೆಲ್ಲಗೆ ಕೋಣೆಗೆ ಹೋಗಿ ತನ್ನ ಜತೆಯವನನ್ನು ಎಬ್ಬಿಸಿದ. ಬೇರೆ ಐವಾರು ಹುಡುಗರೂ ಎದ್ದು ಬಂದರು. ಎಲ್ಲರೂ ಸದ್ದುಮಾಡದೆ ಕಿಟಕಿಯ ಬಳಿಗೆ ಬಂದು ಕೊರಳುದ್ದ ಮಾಡಿ ಒಳಗೆ ಇಣಿಕಿನೋಡತೊಡಗಿದರು. ಎಮ್. ಸಿ.ಯು ತನ್ನ ಪ್ರೇಯಸಿಯನ್ನು ಆಲಿಂಗಿಸಿ, ಚುಂಬಿಸುವದನ್ನೂ ಅವರು ಕಂಡರು. ಹೀಗೆ ಎಮ್. ಸಿ. ಯು ರಮಿಸುತ್ತಿರುವಾಗಲೇ ಎಲ್ಲ ಹುಡುಗರು ಒಟ್ಟಾಗಿ ಕೋಣೆಯ ಬಾಗಿಲಿಗೆ ದಡಬಡನೆ ಬಡೆಯತೊಡಗಿದರು. 'ಎಮ್. ಸಿ. ಬಾಗಿಲು ತೆರೆ. ನಾವೂ ಸ್ವಲ್ಪ ಸಿನೆಮ ನೋಡುತ್ತೇವೆ' ಎಂದು ಒಂದೇ ಸವನೆ ಎಲ್ಲರೂ ಬೊಬ್ಬಿಟ್ಟರು. ಒಂದೆರದು ನಿಮಿಷಗಳ ತರುವಾಯ ಎಮ್. ಸಿ ಯು ಬಂದು ಬಾಗಿಲು ತೆರೆದ. ಸಿಟ್ಟಿನಿಂದ ಕೆಂಪಗಾಗಿ "ಬೇಕಾದಷ್ಟು ನೋಡಿರಿ. ನಿಮಗೆಲ್ಲರಿಗೂ ತೋರಿಸುತ್ತೇನೆ" ಎಂದು ಮಂಚದ ಮೇಲೆ ಮಲಗಿದ್ದ ಹೆಣ್ಣಿನ ರೂಪದ ವ್ಯಕ್ತಿಯ ಸೀರೆಕುಪ್ಪಸಗಳನ್ನೆಲ್ಲ ಬಿಚ್ಚಿದ. ನೋಡುವುದೇನು? ಸ್ತ್ರೀವೇಷಧಾರಿಯಾದ ಒಬ್ಬ ಹುಡುಗನು ಗೊಳ್ಳೆಂದು ನಗುತ್ತಾ ಎದ್ದು ನಿಂತ.

'ಈಗಾಗಲಾದರೂ ಸಮಾಧಾನವಾಯಿತಲ್ಲ. ನಾನು ಸೂಳೆಗಾರಿಕೆ ಮಾಡಿದರೆ ನಿಮಗೆ ಬಂದ ಕಷ್ಟವೇನು? ಎಲ್ಲರಿಗೂ ನನ್ನ ಮೇಲೆ ದೃಷ್ಟಿ. ಎಲ್ಲರೂ ನನ್ನ ಕುರಿತು ಸಂಶಯ ಪಡುವವರೆ! ಆಯ್ತಲ್ಲವೇ ನಿಮ್ಮ ಸಂಶಯ ನಿವಾರಣೆ? ನಡೆಯಿರಿ ಇಲ್ಲಿಂದ ನಿಮಗೆ ಇಲ್ಲೇನೂ ಕೆಲಸವಿಲ್ಲ" ಎಂದು ಬೇಕಾದಂತೆ ಅವರನ್ನೆಲ್ಲ ಬೈದು ಹೊರಗೆ ಕಳುಹಿಸಿದ. ಹುಡುಗನು ಅವನ ಅತ್ತಿಗೆಯ ತಮ್ಮನೆಂದೂ, ಎಮ್. ಸಿ. ಯು ಪ್ರತಿದಿನ ಸಂಜೆ ಹೋಗುತಿದ್ದುದು ಅವನ ಅತ್ತಿಗೆಯ ಮನೆಗೆಂದೂ ನಮಗೆ ಆಗ ಗೊತ್ತಾಯಿತು.

ಹೀಗೆಲ್ಲಾ ಪರಿಸ್ಥಿತಿಯಿರುವಾಗ, ಎಮ್. ಸಿ. ಯ ಮೇಲೆ ದುರ್ನಡತೆಯ ಆರೋಪ ಹೊರಿಸುವುದಾದರೂ ಹೇಗೆ? ನೀನು ಅವನ ಹೆತ್ತವರೊಡನೆ ಮಾತನಾಡದಿದ್ದುದೇ ಒಳ್ಳೇಯದಾಯಿತು. ಕಣ್ಣಾರೆ ಕಂಡರೂ ಪರಾಮರ್ಶಿಸಬೇಕಷ್ಟೆ!

"ಹಾಸ್ಟೆಲ್‌ಡೇ" ಬಹಳ ವಿಜೃಂಭಣೆಯಿಂದ ಜರಗಿತು. ಎಮ್. ಎಲ್. ಎ. ಗಳಾದ ಶ್ರೀ ಶ್ರೀನಿವಾಸರಾಯರು ಅಧ್ಯಕ್ಷರಾಗಿದ್ದರು. ಭಾಷಣ, ವಿನೋದಾವಳಿ, ಭೋಜನ ಇತ್ಯಾದಿ ಕಾರ್ಯಕ್ರಮವಿತ್ತು. ನಮ್ಮ ಶಾಲೆಯ ವರ್ಧಂತಿಯೂ ಅವರ ಅಧ್ಯಕ್ಷತೆಯಲ್ಲೇ ಜರಗಿತು. ನಮಗೆ ವರ್ಷಕ್ಕೊಬ್ಬರು ಅಧ್ಯಕ್ಷರು. ಎಲ್ಲಿ ನೋಡಿದರಲ್ಲಿ ಎಲ್ಲಾ ಸಭೆ, ಸಮಾರಂಭಗಳಿಗೆ ಅವರೇ ಅಧ್ಯಕ್ಷರು ಕಳೆದ ವರ್ಷ ಜಿಲ್ಲಾ ಜಡ್ಜಿ ಉಮಾನಾಥರಿದ್ದರು. ಈ ವರ್ಷ ಅಧ್ಯಕ್ಷತೆಯು ಬೆಳ್ಳಿ ಶ್ರೀನಿವಾಸರಾಯರದು ವರ್ಧಂತಿಯೇನೋ ಸಂಭ್ರಮದಲ್ಲಿ ಜರಗಿತು. ನಾನು ತರಬೇತು ಮಾಡಿದ ನಾಟಕವನ್ನು ಮಾತ್ರ ಆಡಿ ತೋರಿಸಲಿಕ್ಕಾಗಲಿಲ್ಲ. ನಾಯಕ ಪಾತ್ರದವನಿಗೇ ವಿಶೇಷ ಕಾಹಿಲೆಯಾದುದರಿಂದ ಆ ಕಾರ್ಯಕ್ರಮವನ್ನು ಬಿಡಬೇಕಾಯಿತು. ನನಗೇನೂ ಬೇಸರವಿಲ್ಲ.

ನಿನ್ನ ಯೋಗಕ್ಷೇಮಗಳ ವಿಚಾರ ಬರೆಯುತ್ತಿರು.

ಇತಿ ನಿನ್ನವ,

**ಶಾಂತಾರಾಮ.**

೯

ಮಂಗಳೂರು,

18—2—1943

ಪ್ರಿಯಮಿತ್ರ ಸದಾಶಿವ,

ನಿಮಗೆ ತುಟ್ಟಿಭತ್ತೆ ಪುನಃ ಏರಿತೆಂದು ಕೇಳಿ ನನಗೆ ಸಂತೋಷವಾಯಿತು. ಈ ಹೊತ್ತಿನ ಪರಿಸ್ಥಿತಿಯಲ್ಲಿ ಸೇಕಡಾ ನೂರರಷ್ಟು ತುಟ್ಟಿಭತ್ತೆ ಕೊಟ್ಟರೂ ನಮಗೆ ಸಾಕಾಗಲಿಕ್ಕಿಲ್ಲ. ನಿನಗಾದರೋ ಚಿಂತಿಲ್ಲ. ನೀನು ಈ ಕೆಲಸವನ್ನೇ ನಂಬಿಕೊಂಡಿಲ್ಲವಷ್ಟೆ! ನಮ್ಮ ಅವಸ್ಥೆ ಏನೆಂದು

ಹೇಳಲಿ. ಖಾಸಗಿ ಶಾಲೆಗಳಲ್ಲಿ ಕೆಲಸಮಾಡುವ ಉಪಾಧ್ಯಾಯರ ಪಾಡೆಲ್ಲ ಒಂದೇ. ತುಟ್ಟಿಭತ್ತೆಯೆಂದು ತಿಂಗಳಿಗೆ ಐದು ರೂಪಾಯಿ ಕೂಡಿಸಿ ಕೊಡುತ್ತಾರೆ. ತಾಪತ್ರಯಗಳ ಕುರಿತು ಹೇಳಿದಷ್ಟಿದೆ. ಹೋಗಲಿ.

ಎಮ್.ಸಿ.ಯ ಮತ್ತೊಂದು ಕತೆ ಕೇಳು. ಕಳೆದ ಸಲ ಒಂದು ನಾಟಕವಾಗಿತ್ತಷ್ಟೆ. ಈ ಬಾರಿ ಒಂದು ಪತ್ತೇದಾರಿ ಕತೆ ಬರೆಯುತ್ತೇನೆ.

'ಹಾಸ್ಟೆಲ್ ಡೇ'ಗೆಂದು ಸ್ಪೆಶಲ್ ಕಾರ್ಡಿನ ಮೇಲೆ ಸಕ್ಕರೆ ತಂದಿದ್ದರು. ಆ ಸಕ್ಕರೆಯ ಸ್ವಲ್ಪಂಶ ಹಾಗೆಯೇ ಉಳಿದಿತ್ತು. ಅಡಿಗೆಯವನು ಅದನ್ನೊಂದು ಚೀಲದಲ್ಲಿ ಹಾಕಿ, ಒಲೆಯ ಮೇಲಿನ ಹಲಗೆಯಲ್ಲಿ ಇಟ್ಟಿದ್ದನಂತೆ. 'ಎಮ್. ಸಿ.ಎಂಡ್ ಕೊ' ರವರ ದೃಷಿ ಆ ಸಕ್ಕರೆಯ ಮೇಲೆ ಬಿತ್ತು. ಎಮ್ ಸಿ , ಕಿಟ್ಟು, ರಮಣ ಎಲ್ಲರೊಟ್ಟಾಗಿ ಆ ಸಕ್ಕರೆಯನ್ನು ದೋಚಿಬಿಟ್ಟರು—ಶರಬತ್ ಮಾಡೋಣ ಎಂದು. ಅಡಿಗೆಯವನು ಸುಪರಿಂಟೆಂಡೆಂಟರಲ್ಲಿಗೆ ದೂರು ಕೊಂಡುಹೋದ. ಇದು ಎಮ್. ಸಿ.ಗೂ ತಿಳಿಯಿತು. ಅಡಿಗೆಯವನಿಗೂ ಎಮ್. ಸಿ. ಗುಂಪಿಗೂ ಕಾಳಗವಾಯಿತು. ಒಂದೆರಡು ಪೆಟ್ಟುಗಳೂ ಬಿದ್ದುವೆಂದು ತೋರುತ್ತೆ. ಅಷ್ಟರಲ್ಲಿ ಸುಪರಿಂಟೆಂಡೆಂಟರು ಹಾಸ್ಟೆಲಿಗೆ ದಯಮಾಡಿಸಿದರು. ಕಳ್ಳನ ವಿಚಾರಣೆಯೂ ನಡೆಯಿತು. ಎಮ್. ಸಿ. ಗುಂಪಿನವರೆಲ್ಲ ತಮಗೆ ಗೊತ್ತೇ ಇಲ್ಲ"ವೆಂದರು ಸುಪರಿಂಟೆಂಡೆಂಟರು ಅದನ್ನು ನಂಬಲೇ ಇಲ್ಲ. ಅಡಿಗೆಯವನನ್ನು ಕರೆದು, ಎಮ್. ಸಿ ಯ ಕೋಣೆಯ ವರೆಗೆ ಬಂದು ಕೋಣೆಯ ಒಳಗೆ ಹೋಗಿ ಸಕ್ಕರೆಯನ್ನು ಹುಡುಕುವಂತೆ ಅಡುಗೆಯವನಿಗೆ ಅಪ್ಪಣೆಯಿತ್ತರು. ಹುಡುಗರ ಅದೃಷ್ಟವಶಾತ್, ಸಕ್ಕರೆಯು ಆಗ ಕಿಟ್ಟುವಿನ ಕೋಣೆಯಲ್ಲಿತ್ತು. ಎಮ್. ಸಿ. ಯ ಕೋಣೆಯೆಲ್ಲಾ ಹುಡುಕಿದ ಬಳಿಕ ಅಲ್ಲಿಗೂ ಬರುವರೆಂದು ಎಲ್ಲರಿಗೂ ಖಂಡಿತವಿತ್ತು ಆದರೆ ಎಮ್. ಸಿ. ಯು ಒಂದಿಷ್ಟೂ ಹೆದರಲಿಲ್ಲ. ಸುಪರಿಂಟೆಂಡೆಂಟರು ವರಾಂಡದಲ್ಲಿ ನಿಂತಿದ್ದಂತೆಯೇ ಅವನು ಕಿಟ್ಟುವಿನ ಕೋಣೆಯನ್ನು ಗುಟ್ಟಾಗಿ ಹೊಕ್ಕು ಅಲ್ಲಿದ್ದ ಸಕ್ಕರೆಯನ್ನು ಬೇಗನೆ ಒಂದು ತಂಬಿಗೆಗೆ ಸುರಿದು ಸುಪರಿಂಟೆಂಡೆಂಟರು ನೋಡುತ್ತಿದ್ದಂತೆಯೇ ಆ ತಂಬಿಗೆಯನ್ನು ಹಿಡಿದು

ಕೊಂಡು ಹೊರಬಂದ. ನೀರು ತರಲು ಹೊರಟವನಂತೆ ನಟಿಸಿ ಕೆಲವೇ ಗಜಗಳ ದೂರದಲ್ಲಿನ ಬಾವಿ ಕಟ್ಟೆಗೆ ಹೋದ. ಅಲ್ಲಿ ಆ ತಂಬಿಗೆಯನ್ನು ಹಗ್ಗದಿಂದ ಕೆಳಗಿಳಿಸಿ ಸಕ್ಕರೆಯನ್ನೆಲ್ಲ ಬಾವಿಪಾಲು ಮಾಡಿದ. ನೋಡಿದೆಯಾ ಎಮ್. ಸಿ.ಯ ಚಮತ್ಕಾರ! ಅಡಿಗೆಯವನು ಕಿಟ್ಟುವಿನ ಮತ್ತಿಬ್ಬರ ಕೋಣೆಗಳನ್ನು ಹುಡುಕಿದುದಾಯಿತು. ಎಲ್ಲಿಯೂ ಸಕ್ಕರೆ ದೊರೆಯಲಿಲ್ಲ. ಸುಪರಿಂಟೆಂಡೆಂಟರಿಗೆ ಬಂದ ಸಿಟ್ಟನ್ನು ಸಹಿಸಲಿಕ್ಕಾಗಲಿಲ್ಲ. ಎಮ್. ಸಿ. ಮತ್ತು ಅವನ ತಂಡದವರು ಏನೋ ತಂತ್ರ ಹೂಡಿರುವರೆಂದು ಅವರಿಗೆ ಖಚಿತವಾಗಿತ್ತು. ಆದರೆ ಅದನ್ನು ಬಯಲಿಗೆಳೆಯಲು ಸಾಧ್ಯವಾಗದೇ ಹೋಯಿತು. ಅವರು ಎಮ್. ಸಿ. ತಂಡದವರಿಗೆ ಎಚ್ಚರಿಕೆಯಿತ್ತು ಒಂದೊಂದು ರೂಪಾಯಿ ಜುಲ್ಮಾನೆ ವಿಧಿಸಿ ಹೊರಟು ಹೋದರು.

ಎಮ್. ಸಿ.ಯ ತಂಡದವರೆಲ್ಲ ತಮ್ಮ ಮುಂದಾಳುವಿನ ಸಮಯೋಚಿತ ಬುದ್ಧಿವಂತಿಗೆ ಧೈರ್ಯಗಳಿಗೆ ತುಂಬಾ ಮೆಚ್ಚಿದರು. ನಿತ್ಯ ಜೀವನದಲ್ಲಿ ಇಂತಹ ಘಟನೆಗಳಾಗುವಾಗ ಪತ್ತೇದಾರಿ ಕತೆಗಳನ್ನು ಹೇಗೆ ನಂಬದಿರಲು ಸಾಧ್ಯ?

ನಿನಗೆ ನಮಸ್ಕಾರ. ಮಗು ಕ್ಷೇಮದಲ್ಲಿದೆಯೆಂದು ನಂಬುತ್ತೇನೆ.

ಇತಿ ನಿನ್ನವ,

**ಶಾಂತಾರಾಮ**

೧೦

ಮಂಗಳೂರು,

25-2-1943

ಪ್ರಿಯಮಿತ್ರ ಸದಾಶಿವ,

ನಿನಗೊಂದು ವಿಶೇಷ ವರ್ತಮಾನವಿದೆ. ನನ್ನ ಪತ್ರಗಳ ಕಥಾನಾಯಕ ಎಮ್. ಸಿ.ಯನ್ನು ಹಾಸ್ಟೆಲಿನಿಂದ ನಿನ್ನೆ ಹೊರವಬ್ಬಿದರು, ಅಪರಾಧವೇನು ಗೊತ್ತೇ? ಪಾಪದ ಹುಡುಗ ರಮಾನಾಥನು ಮೊನ್ನೆ ರಾತ್ರಿ ಸಿನೆಮಾದಿಂದ ಒಬ್ಬನೇ ಹಿಂದೆ ಬಂದಾಗ, ಅವನ ದಾರಿಯಲ್ಲಿ ಅವಿತು

ಕೊಂಡು, ಅವನ ಮೈಮೇಲೆ ಮಣ್ಣೆರಚಿ, ಭೂತದ ಹೆದರಿಕೆ ಹುಟ್ಟಿಸಿದುದು. ರಮಾನಾಥನಿಗೆ ಒಮ್ಮೆಲೇ ಜ್ವರವೇರಿತು. ನಿನ್ನೆ ಅವನ ಹೆತ್ತವರು ಇಲ್ಲಿಗೆ ಬಂದಿದ್ದರು. ಈಗ ಅವನನ್ನು ಸಮೀಪದ ಸಂಬಂಧಿಕರಲ್ಲಿಗೆ ಕೊಂಡುಹೋಗಿದ್ದಾರೆ. ಎಮ್. ಸಿ. ಈ ತಂತ್ರದಲ್ಲಿಯೂ ಸಿಕ್ಕಿಬೀಳುತ್ತಿರಲಿಲ್ಲ. ಆದರೆ ರಮಾನಾಥನ ಗಲಾಟೆಗೆ ಎಚ್ಚೆತ್ತ ಹಾಸ್ಟೆಲ್ ವಿದ್ಯಾರ್ಥಿಗಳು ತೋಟದಲ್ಲೆಲ್ಲ ಹುಡುಕುವಾಗ, ಅಲ್ಲೇ ಸುಳಿದಾಡುತಿದ್ದ ಎಮ್. ಸಿ. ತಾನು ಕಣ್ಮರೆಯಾಗಲು ಪ್ರಯತ್ನಿಸಿದನಂತೆ. ಓಡುವ ಭರದಲ್ಲಿ ಎಲ್ಲೋ ಕಲ್ಲಿಗೆಡವಿ ಬಿದ್ದುಬಿಟ್ಟ. ಅವನ ಕೆನ್ನೆ, ಮೂಗು ಕೈ ಕಾಲುಗಳಿಗೆ ಚೆನ್ನಾಗಿ ಪೆಟ್ಟಾಗಿತ್ತು.

ಹಾಸ್ಟೆಲ್ ಅಧಿಕಾರಿಗಳಿಗೆ ಮೊನ್ನೆಯ ಸಕ್ಕರೆಯ ಪ್ರಕರಣದಲ್ಲಿಯೇ ಎಮ್. ಸಿ. ಯ ಮೇಲೆ ಕೆಟ್ಟ ಅಭಿಪ್ರಾಯವಿತ್ತು. ಈಗಲಂತೂ ಅದು ಬಲವಾಯಿತು. 'ಹಾಸ್ಟೆಲಿಗೆ ಅಪಾಯಕಾರಿ" ಎಂಬ ಕಾರಣ ಕೊಟ್ಟು, ನಿನ್ನೆ ಮಧ್ಯಾಹ್ನ ಅವನನ್ನು ತಳ್ಳಿಹಾಕಿದರು. ಈಗ 'ಗಂಗಾ ಭವನ'ದಲ್ಲಿದ್ದಾನೆಂದು ಎಲ್ಲರೂ ಹೇಳುತ್ತಾರೆ.

ದೊಡ್ಡವರ ಮಕ್ಕಳೊಳಗೇನೆ ಹೀಗೆ ಗಲಭೆಯಾದುದು ಒಳ್ಳೇಯದಾಯಿತು. ರಮಾನಾಥನು ಬಡವರ ಹುಡುಗನಾಗಿದ್ದರೆ ಎಮ್. ಸಿ. ಯು ಇನ್ನೂ ಹಾಸ್ಟೆಲಲ್ಲೇ ಇರಬಹುದಿತ್ತೋ ಏನೊ?

ಬೇರೇನೂ ಸಮಾಚಾರವಿಲ್ಲ, ನಾನು ಕ್ಷೇಮ.

ಇತಿ ನಿನ್ನವ,

**ಶಾಂತಾರಾಮ.**

೧೧

ಮಂಗಳೂರು,

1-3-1943.

ಪ್ರಿಯಮಿತ್ರ ಸದಾಶಿವ,

ನೀನು ಬಹಳ ಹುಷಾರ್ ಕಣೊ, ಇಲ್ಲವಾದರೆ ಎಮ್. ಸಿ. ಯೆಂದರೆ ನಿನ್ನ ತಮ್ಮನೆಂಬು ಈಗ ಹೇಳುವುದೆ? ಗೊತ್ತಾಯಿತು. 'ಎಮ್. ಸಿ. ಮುಂತಾದವರ ಕುರಿತು ಆಗಾಗ ಬರೆಯುತ್ತಿರು' ಎಂದು

ಪದೇ ಪದೇ ನೀನು ಹೇಳುತ್ತಿದ್ದುದರ ಅರ್ಥ ನನಗೀಗ ಸ್ಪಷ್ಟವಾಯಿತು. ನಿಜ ಸಂಗತಿಯನ್ನು ಇಷ್ಟುಕಾಲ ಮರೆಮಾಚಿ, ಒಮ್ಮೆಲೇ ಬಾಂಬಿನಂತೆ ನನ್ನ ಮೇಲೆ ಎಸೆದುಬಿಟ್ಟೆಯಲ್ಲವೆ? ಚಿಂತೆಯಿಲ್ಲ. ನೀನು ಎಮ್. ಸಿ. ಯ ಅಣ್ಣನಾದುದಕ್ಕೆ ಸಾರ್ಥಕವಾಯಿತು.

ನನಗೆ ಮತ್ತೇನೂ ಬೇಸರವಿಲ್ಲ—ನೀನೆಂದಂತೆ ಎಮ್. ಸಿ. ಯು ನಿನ್ನ ತಮ್ಮನೆಂದು ನನಗೆ ಮೊದಲೇ ತಿಳಿದಿದ್ದರೆ, ನಾನು ಎಷ್ಟು ಮಾತ್ರಕ್ಕೂ ಅಂತಹ ಮುಚ್ಚುಮರೆಯಿಲ್ಲದ ಪತ್ರಗಳನ್ನು ಬರೆಯುತ್ತಿರಲೇ ಇಲ್ಲ. ನೀನು ಆ ಪತ್ರಗಳನ್ನು ಓದಿ ಎಷ್ಟು ಆನಂದಪಟ್ಟೆಯೋ ಸದಾಶಿವ! ಹಾಸ್ಟೆಲಿಗೆ ಒಂದೆರಡು ಸಲ ಬಂದವಳು ನಿನ್ನ ಹೆಂಡತಿಯೆಂದು ಗೊತ್ತಿದ್ದೂ ನನಗೆ ತಿಳಿಸದೆ ಸುಮ್ಮನೆ ಕುಳಿತೆಯಲ್ಲ! ನಿನ್ನ ತಮ್ಮನ ವಿಚಾರ ಏನೆಲ್ಲ ಬರೆದೆನೋ ನನಗೀಗ ನೆನಪಿಲ್ಲ. ಹೃದಯದಲ್ಲಿ ಉಕ್ಕಿ ಬರುತಿದ್ದ ಭಾವನೆಗಳನ್ನೆಲ್ಲ ನಿರರ್ಗಳವಾಗಿ ಬರೆದುಬಿಟ್ಟೆ. ಅವುಗಳಲ್ಲಿ ನಿನಗೆ ಮತ್ತು ನಿಮ್ಮ ಮನೆಯವರಿಗೆ ಒಗ್ಗದವುಗಳೆಷ್ಟಿದ್ದವೊ ನಾನರಿಯೆ. ನಿನ್ನ ಮನಸ್ಸನ್ನು ನೋಯಿಸಿದ್ದರೆ ಕ್ಷಮಿಸು, ಕ್ಷಮಿಸುವೆಯಷ್ಟೆ?

ಎಮ್. ಸಿ. ಈಗ 'ಗಂಗಾಭವನ'ದಲ್ಲಿದ್ದಾನೆ' ಇನ್ನು ಪರೀಕ್ಷೆಗೆ ಹೆಚ್ಚುಕಾಲ ಉಳಿದಿಲ್ಲ. ಆದುದರಿಂದ ಅವನು ಅಲ್ಲೇ ಇರಲಿ ಓದಲಿಕ್ಕೂ ಅಲ್ಲಿ ಎಲ್ಲಾ ಸೌಕರ್ಯಗಳಿವೆಯಂತೆ. ನಾನೂ ಆಗಾಗ ಅವನ ಯೋಗಕ್ಷೇಮಗಳ ವಿಚಾರ ತಿಳಿದು ನಿನಗೆ ಬರೆಯುತ್ತೇನೆ. ಅಂತಹ ಹುಡುಗರೇ ಬಾಳಿನಲ್ಲಿ ಮುಂದಕ್ಕೆ ಬೆಳಗುವರು ಸದಾಶಿವ ನಿನಗೆ ಆ ಬಗ್ಗೆ ಯೋಚನೆ ಬೇಡ. ನೀನು ಎಂದಿನಂತೆ ಅವನಿಗೆ ಬುದ್ಧಿವಾದ ಬರೆಯುತ್ತಿಯಲ್ಲವೆ? ನಿನ್ನ ಕರ್ತವ್ಯ ನೀನು ಮಾಡಿದಂತಾಯಿತು. ನಾನೂ ಅವನಿಗೆ ಒಂದೆರಡು ಮಾತು ಹೇಳುತ್ತೇನೆ. ಮತ್ತೆಲ್ಲಾ ಭಗವಂತನ ಇಷ್ಟ.

ತಿಳಿಯದೆ ಮನನೋಯಿಸಿದುದಕ್ಕಾಗಿ ಕ್ಷಮಿಸುವೆಯಷ್ಟೆ.

ಇತಿ ನಿನ್ನವ,

**ಶಾಂತಾರಾಮ.**

೧೧

# ಕತೆಗಾರ

ಲೋಕದಲ್ಲಿ ಎರಡು ತರದ ಜನರಿದ್ದಾರೆ. ಕಿಸೆ ತುಂಬಾ ಹಣ ವಿದ್ದರೂ ಹಣಕ್ಕಾಗಿಯೇ ದುಡಿಯುವವರು ಕೆಲವರು. ಕೈಯಲ್ಲಿ ಕಾಸಿಲ್ಲ ದಿದ್ದರೂ ಹೆಸರಿಗಾಗಿಯೇ ಶ್ರಮಪಡುವವರು ಮತ್ತೆ ಕೆಲವರು. ಕರ್ಣಾ ಟಕದ ವೃತ್ತಪತ್ರಿಕೆಗಳಿಗೆ ಬರೆಯುವ ಲೇಖಕರು ಮತ್ತು ಕತೆಗಾರರು ಬಹ್ವಂಶ ಎರಡನೆಯ ಪಂಗಡದವರೇ ಆಗಿದ್ದಾರೆ. ಅಂತಹ ಜನರಲ್ಲಿ ಶಾಮರಾಯನೂ ಒಬ್ಬನಾಗಿದ್ದ.

ಶಾಮರಾಯನು ತನ್ನ ಕತೆಗಳನ್ನು ಕಳುಹಿಸಿಕೊಡದ ಒಂದೇ ಒಂದು ಪತ್ರಿಕೆಯಿರಲಿಲ್ಲ. ಹಾಗೆಯೇ ಅವುಗಳನ್ನು ಪ್ರಕಟಿಸಿದ ಪತ್ರಿ ಕೆಯೂ ಇಲ್ಲ. ಪ್ರತಿಸಲ ಪತ್ರಿಕೆಗೊಂದು ಕತೆ ಕಳುಹಿಸುವುದು, ಅದರ ಪ್ರಕಟಣೆಯ ದಿನವನ್ನು ಕಾಯುವುದು, ಆ ದಿನ ಅಂಚೆಯವನ ಸವಾರಿ ಯನ್ನು ನಿರೀಕ್ಷಿಸುವುದು, ಅವನ ಕಾಗದಗಳ ಹೊರೆಯನ್ನು ಕಂಡು ತನ್ನ ಕತೆಯನ್ನೊಳಗೊಂಡ ಪತ್ರಿಕೆಯಿರಬಹುದೆಂದು ಮನಸ್ಸಿನಲ್ಲಿಯೇ ಮಂಡಿಗೆ ಯುಣ್ಣುವುದು, ಅವನು ಮನೆ ಬಾಗಿಲನ್ನು ದಾಟಿದೊಡನೆ ನಿರಾಶೆಯ ನಿಟ್ಟುಸಿರನ್ನು ಬಿಟ್ಟು ಆಫೀಸಿಗೆ ಹೊರಟುಹೋಗುವದು—ಇಂತಹ ಒಂದಲ್ಲ ಎರಡಲ್ಲ, ನೂರಾರು ಅನುಭವ ಶಾಮರಾಯನಿಗಾಗಿತ್ತು. ಎಷ್ಟೋ ವೇಳೆ ಅವನು ಕತೆ ಬರೆಯುವ ಗೋಜಿಯಲ್ಲಿ, ಇಲ್ಲವೇ ಅಂಚೆಯವನಿಗೆ ಕಾದುನಿಂತು ಆಫೀಸು ಸಮಯವನ್ನು ಮರೆತುದು ಇದೆ. ತಡವಾದ ಕಾರಣ ಅಧಿಕಾರಿಗಳ ಉಗ್ರಶಾಪಕ್ಕೆ ಬಲಿಯಾದುದೂ ಇದೆ. ಆದರೂ ಕತೆ ಬರೆಯುವ ಹವ್ಯಾಸ ಶಾಮರಾಯನ ಬೆನ್ನು ಬಿಡಲೇ ಇಲ್ಲ.

ಕಾಲಚಕ್ರವು ಉರುಳುತ್ತಲೇ ಇದ್ದಂತೆ ಶಾಮರಾಯನು ಹೊಸ

ತೊಂದು ನಡೆವಳಿಯನ್ನು ಜಾರಿಗೆ ತಂದ. ಪತ್ರಿಕೆಗೆ ಕಳುಹಿಸುವ ಪ್ರತಿಯೊಂದು ಕತೆಯೊಂದಿಗೆ ಮೂರು ಪಾವಾಣೆಯ ಚೀಟು ಇಡುವುದು ಮತ್ತು "ಕತೆಯು ತಿರಸ್ಕೃತವಾದರೆ ದಯವಿಟ್ಟು ತಿಳಿಸಿಬಿಡಿ" ಎಂದು ಸಂಪಾದಕರನ್ನು ಬೇಡುವುದು. ಶಾಮರಾಯನ ಬೇಡಿಕೆಗಳಿಗೆ ಕೆಲವು ಸಂಪಾದಕರೇನೊ ಕ್ಷಿಪ್ರದಲ್ಲಿಯೇ ಉತ್ತರವೀಯುತಿದ್ದರು. "ತಮ್ಮ ಕತೆಯನ್ನು ಪ್ರಕಟಿಸಲಾರೆವು. ವಿಷಾದಿಸುತ್ತೇವೆ" ಎಂದಿಷ್ಟಾದರೂ ಬರೆಯುತಿದ್ದರು. ಉಳಿದ ಪುಣ್ಯಾತ್ಮರು ಆ ಮೂರು ಪಾವಣೆಯ ಚೀಟನ್ನೂ ಬಗಲಿಗೆ ಹೊಡೆದು, ಸುಮ್ಮನೆ ಕುಳಿತುಬಿಡುತಿದ್ದರು. ಪಾಪ! ಶಾಮರಾಯನಂತಹ ಬಡಸಾಹಿತಿಗಳ ಪಾಡೆಲ್ಲ ಹೀಗೆಯೇ ಆಗಿದೆ.

ಕೆಲವೇ ತಿಂಗಳುಗಳಲ್ಲಿ ಶಾಮರಾಯನ ಮೇಜು ಸಂಪಾದಕರಿಂದ ತಿರಸ್ಕೃತವಾದ ಕತೆಗಳ ಕರಡುಪ್ರತಿಗಳಿಂದಲೇ ತುಂಬಿಹೋಯಿತು. ಆದರೂ ಅವನು ತನ್ನ ಪರಿಶ್ರಮವನ್ನು ಬಿಡಲಿಲ್ಲ. ಅವನು ಎಂದಿನಂತೆಯೆ ಕರ್ಣಾಟಕದ ಪ್ರಸಿದ್ಧ ಗ್ರಂಥಕರ್ತರ ಹೊಸಹೊಸ ಗ್ರಂಥಗಳನ್ನೆಲ್ಲ ಓದುತಿದ್ದ. ಸಾರ್ವಜನಿಕ ವಾಚನಾಲಯಕ್ಕೆ ಹೋಗಿ ಪತ್ರಿಕೆಗಳನ್ನೆಲ್ಲ ಬಿಡಿಸಿನೋಡುತಿದ್ದ. ತಾನೂ ಆಗಾಗ ಕತೆ ಬರೆಯುತ್ತಲೇ ಇದ್ದ. ಪತ್ರಿಕೆಗಳಲ್ಲಿ ಬೇರಾವ ವಿಷಯಗಳನ್ನು ಬಿಟ್ಟರೂ ಕತೆಗಳನ್ನು ಮಾತ್ರ ಅವನು ಓದದವೆ ಬಿಡುತ್ತಿರಲಿಲ್ಲ. ಅವನಿಗೆ ಮತ್ತೊಂದು ಅಭ್ಯಾಸವಿತ್ತು ಕತೆಯನ್ನು ಓದಿ ಮುಗಿಸಿದ ಬಳಿಕ ತಾನೇ ಬರೆದ ಒಂದು ಕತೆಯೊಂದಿಗೆ ಅದನ್ನು ಹೋಲಿಸಿನೋಡುತಿದ್ದ. "ಛೆ, ಇದಕ್ಕಿಂತ ನನ್ನ ಕತೆ ನೂರುಪಾಲಿಗೆ ಉತ್ತಮ.......ಸಂಪಾದಕರ ಪಕ್ಷಪಾತವೆ?" ಎಂದು ಮನಸ್ಸಿನೊಳಗೇ ಆ ಸಂಪಾದಕರನ್ನು ಶಪಿಸುತಿದ್ದ.

ಶಾಮರಾಯನ ಎಣಿಕೆಯಾದರೋ ಬಹುಮಟ್ಟಿಗೆ ನಿಜವೇ ಆಗಿತ್ತು. ಏಕೆಂದರೆ, ಪತ್ರಿಕೆಗಳಲ್ಲಿ ಬರುವ ಹಲವು ಕತೆಗಳು ಹೆಸರಿಗೆ ಮಾತ್ರ ಕತೆಗಳಾಗಿದ್ದುವು. ಸಂಪಾದಕರು ಏನೆಲ್ಲ ವಾತ್ಸಲ್ಯದಿಂದ ಅಥವಾ ಪುಟ ತುಂಬಿಸುವ ಉದ್ದೇಶದಿಂದ ಅವುಗಳನ್ನು ಅಚ್ಚುಹಾಕಿದಂತೆ ತೋರುತಿತ್ತು. ಕತೆಯಲ್ಲಿರುವುದು ಬರೇ ಗೋಳಿ ಸೊಪ್ಪಾದರು, ಅದರ ಮೇಲೆ

ದಪ್ಪವಾದ ಅಕ್ಷರಗಳಲ್ಲಿ ಬರೆದವರಿಗೆ ಮಾತ್ರ ಅರ್ಥವಾಗುವಂತಹ, ಅನ್ಯೋನ್ಯ ಸಂಬಂಧವಿಲ್ಲದ ಏನೋ ಕೆಲವು ವಾಕ್ಯಗಳನ್ನು ಬರೆದು ತುಂಬಾ ಸ್ವಾರಸ್ಯವಿರುವಂತೆ ನಟಿಸುತಿದ್ದರು. ಶಾಮರಾಯನಿಗಾಗಲೀ ಅವನ ಮಿತ್ರರಿಗಾಗಲೀ ಆ ವಾಕ್ಯಗಳ ಅರ್ಥವೂ ಆಗುತ್ತಿರಲಿಲ್ಲ. ಕತೆಯ ಮಹತ್ವವೂ ತಿಳಿಯುತ್ತಿದ್ದಿಲ್ಲ.

ಒಮ್ಮೆ ಶಾಮರಾಯನು "ಉದಯ" ಎಂಬ ಮಾಸಪತ್ರಿಕೆಯಲ್ಲಿ ಕುಮಾರಿ ಶಶಿಕಲಾ ಎಂಬವಳು ಬರೆದ "ಕೊನೆಯ ಕತೆ" ಎಂಬ ಕತೆಯನ್ನು ಓದಿದ. ಶಾಮರಾಯನು ಅದೇ ಹೆಸರಿನ ಒಂದು ಕತೆಯನ್ನು ಈ ಮುಂಚೆ ಬರೆದಿದ್ದ. ಶಶಿಕಲೆಯ ಕತೆಯನ್ನು ಓದಿದ ಬಳಿಕ, ಆ ಸಂಚಿಕೆ ಮತ್ತು ತನ್ನ ಕತೆಯ ಕರಡು ಪ್ರತಿಯೊಂದಿಗೆ ಅವನು ಮೂರ್ತಿಯಲ್ಲಿಗೆ ಹೋದ.

"ನೋಡು ಮೂರ್ತಿ. ನೀನು ಇದ್ದುದನ್ನು ಇದ್ದಂತೆಯೇ ಹೇಳಬೇಕು. ಇವೆರಡು ಕತೆಗಳಲ್ಲಿ ನಿನ್ನ ಮನಸ್ಸಿಗೆ ಯಾವುದು ಚೆನ್ನಾಗಿ ತೋರುತ್ತದೆ?" ಎಂದ.

ಮೂರ್ತಿಯು ಎರಡು ಕತೆಗಳನ್ನೂ ಅಮೂಲಾಗ್ರವಾಗಿ ವಿಮರ್ಶಕ ದೃಷ್ಟಿಯಿಂದ ಓದಿದ. "ಈ ಕತೆಗಳಲ್ಲಿ ಅಜಗಜಾಂತರವಿದೆ ಶಾಮ. ನಾನು ಮುಖಸ್ತುತಿ ಮಾಡುತಿದ್ದೇನೆಂದು ಭಾವಿಸಬೇಡ. ನಿನ್ನ ಕತೆ ಉತ್ತಮವೆನ್ನಲಿಕ್ಕೆ ಯಾವ ಅಡ್ಡಿಯೂ ಇಲ್ಲ"ಎಂದು ಮೂರ್ತಿ ತೀರ್ಮಾನವಿತ್ತ.

"ಹಾಗಾದರೆ, "ಉದಯ"ದ ಸಂಪಾದಕರಿಗೆ ತಲೆ ಸರಿಯಿಲ್ಲವೆ? ನೋಡು, ನನ್ನ .ಕತೆಯನ್ನು ಅವರು ಕಸದ ಬುಟ್ಟಿಗೆ ಬಿಸಾಡಿದ್ದಾರೆ. ಅಲ್ಲಿರಬೇಕಾದುದು ಇಲ್ಲಿ ಬಂದಿದೆ. ನಾನು ಸಂಪಾದಕರ ಮೇಲೆ ಏಕೆ ........ "ಎಂದು ರೇಗುತ್ತಾ ಸಂಪಾದಕರಿಂದ ತನಗೆ ಬಂದ ಪತ್ರವನ್ನು ಮೂರ್ತಿಗೆ ತೋರಿಸಲು ಅದನ್ನು ಮುಂದಕ್ಕೆ ಚಾಚಿದ.

ಅದಕ್ಕೆ ಮೂರ್ತಿಯು "ಸ್ವಲ್ಪ ತಾಳು ಶಾಮು, ಸಿಟ್ಟಾಗಬೇಡ. ನೀನು ಕೂಡ ಬಳೆಗಳನ್ನು ತೊಟ್ಟಿದ್ದರೆ, ನಿನ್ನ ಕತೆಯೂ ಪ್ರಕಟವಾಗು

ತಿತ್ತು. ಸಾಹಿತ್ಯದಲ್ಲಿ ಈಗ ಬಳೆಗಳ ಮತ್ತು ಡಿಗ್ರಿಗಳ ಕಾಲ, ಗೊತ್ತಿಲ್ಲವೆ" ಎಂದು ಅವನನ್ನು ಸಂತಯಿಸಿದ.

ಶಾಮರಾಯನಿಗೂ ಅದು ಹೌದೆಂದು ಕಂಡಿತು.

"ಹೆಂಗಸು ಬರೆದ ಕತೆಯೆಂದು ಪ್ರಕಟಿಸಿದ್ದಾರೆ. ಇರಬಹುದು.... ....ಇರಬಹುದು" ಎಂದು ಆವನು ಸಹಿಗುಟ್ಟಿದ.

"ನಿನಗೂ ನಿನ್ನ ಕತೆಗಳು ಪ್ರಕಟವಾಗಬೇಕೆಂದು ಮನಸ್ಸಿದೆಯೆ? ನಾನೊಂದು ಉಪಾಯ ಹೇಳುತ್ತೇನೆ" ಎಂದ ಮೂರ್ತಿ.

"ಏನೆಂದು? ಹೆಂಗುಸರ ಹೆಸರಲ್ಲಿ ಕಳುಹಿಸಿಕೊಡುವುದೆಂದೇ?"

"ಹುಂ. ಬೇಕಾದರೆ ನೀನೊಮ್ಮೆ ಪರೀಕ್ಷೆ ಮಾಡಿ ನೋಡು."

"ಅದು ಸರಿ. ನೀನು ಒಳ್ಳೇಯ ಪ್ಲಾನ್ ಹೇಳಿಕೊಟ್ಟೆ. ಥ್ಯಾಂಕ್ಸ್" ಎನ್ನುತ್ತಾ ಸಿಟ್ಟಾಗಿ ಬಂದಿದ್ದ ಶಾಮರಾಯ ಹಸನ್ಮುಖಿಯಾಗಿ ಮನೆಗೆ ಹೊರಟು ಹೋದ.

ಆ ರಾತ್ರಿ ಶಾಮರಾಯನು ತನ್ನ ಕತೆಗಳನ್ನು ಇನ್ನು ಮುಂದೆ ತನ್ನ ಹೆಂಡತಿ ರಮಾದೇವಿಯ ಹೆಸರಲ್ಲಿ ಕಳುಹಿಸಿಕೊಡುವುದೆಂದು ನಿರ್ಧರಿಸಿದ. ಆಕೆಯೊಡನೆಯೂ ಅದರ ಮಾತೆತ್ತಿದಾಗ, ಅವಳು ಒಪ್ಪಿಗೆಯಿತ್ತಳು. ತನ್ನ ಹೆಸರು ಪತ್ರಿಕೆಯಲ್ಲಿ ಪ್ರಕಟವಾಗುವುದೆಂದರೆ ಯಾರಿಗೆ ತಾನೆ ಮನಸ್ಸಿಲ್ಲ. ಸರಿ ಶಾಮರಾಯನು ಆ ರಾತ್ರಿಯೆಲ್ಲ ಕುಳಿತು, ತನ್ನ ಹಿಂದಿನ ಕತೆಗಳಲ್ಲೇ ಒಂದನ್ನು ಆರಿಸಿ, ಅದರ ನಕಲು ತೆಗೆದ. 'ವಿಚಿತ್ರ ಸಂಸಾರ' ಎಂದು ಹೊಸತಾಗಿ ನಾಮಕರಣ ಮಾಡಿದ. "ಲೇಖಿಕೆ:- ಶ್ರೀಮತಿ ರಮಾದೇವಿ" ಎಂಬುದಾಗಿ ಬರೆದು ಮರುದಿನದ ಟಪ್ಪಾಲಿಗೇನೆ ಅದನ್ನು "ಉದಯ"ದ ಸಂಪಾದಕರಿಗೆ ಕಳುಹಿಸಿಕೊಟ್ಟ.

"ಉದಯ" ಸಂಚಿಕೆಯು ಉದಯವಾಗುವ ಕೆಲವು ದಿನಗಳ ಮುಂಚಿತವಾಗಿಯೇ ಶ್ರೀಮತಿ ರಮಾದೇವಿಗೆ ಸಂಪಾದಕರಿಂದ ಈ ತೆರನಾಗಿ ಪತ್ರ ಬಂತು. 'ತಮ್ಮ ಕತೆ ಬಹಳ ಸೊಗಸಾಗಿದೆ. ಸಂಪಾದಕ ಮಂಡಲದವರೆಲ್ಲ ಅದನ್ನೋದಿ ತುಂಬಾ ಆನಂದಪಟ್ಟಿದ್ದಾರೆ ನಾವು

ಸದ್ಯದಲ್ಲೇ ಪ್ರಕಟಿಸಲಿರುವ ವಿಶೇಷಾಂಕದಲ್ಲೇ ಅದನ್ನು ಅಚ್ಚು ಹಾಕ ಬೇಕೆಂದಿದ್ದೇವೆ. ದಯವಿಟ್ಟು ತಮ್ಮ ಭಾವಚಿತ್ರವೊಂದನ್ನು ಕಳುಹಿಸು ವಿರಾ? ಉಪಕಾರವಾಗುತ್ತಿತ್ತು. ಇಂತಹದೇ ಹಲವು ಕತೆಗಳನ್ನು ಬರೆದು "ಉದಯ"ವನ್ನು ಪ್ರೋತ್ಸಾಹಿಸಬೇಕಾಗಿ ಅಪೇಕ್ಷಿಸುತ್ತೇವೆ.' ಎಂದಿತ್ತು.

ಸಂಜೆ ಆಫೀಸಿನಿಂದ ಮರಳಿ ಬಂದಿದ್ದ ಶಾಮರಾಯನಿಗೆ ತನ್ನ ಪತ್ನಿಗೆ ಬಂದ ಪತ್ರವನ್ನು ಕಂಡು ಸ್ವರ್ಗವೇ ಅಂಗೈ ಮೇಲೆ ನಲಿಂದಂತಾ ಯಿತು. ಗಂಡ ಹೆಂಡಿರಿಬ್ಬರೂ ತಡಮಾಡದೆ ಅಂದೇ ಸಂಜೆ "ಸ್ಟುಡಿಯೋ" ಕಡೆಗೆ ನಡೆದರು. ಜಾರ್ಜೆಟ್ ಸೀರೆ, ಲೀಲಾ ಚಟ್ನಿಸ್ ರವಕೆ, ದೇವಿಕಾರಣಿ ಲೋಲುಕುಗಳಿಂದ ಅಲಂಕೃತೆಯಾದ ರಮಾ ದೇವಿಯ ಫೋಟೋ ಕೂಡಾ ತೆಗೆಯಲ್ಪಟ್ಟಿತು.

"ನಾಳೆಗೇ ಸಿಗಬೇಕು; ಅಗತ್ಯವಿದೆ" ಎಂದು ಫೋಟೋಗ್ರಾಫರ ನೊಡನೆ ಹೇಳಿ ದಂಪತಿಗಳು ಮನೆಗೆ ಬಂದರು.

ಶಾಮರಾಯ ಮತ್ತು ರಮಾದೇವಿಯರ ಅಂದಿನ ಆನಂದಕ್ಕಂತೂ ಪಾರವೇ ಇರಲಿಲ್ಲ. ಆ ರಾತ್ರಿ ಊಟಕ್ಕೆ ಬಹಳ ತಡವಾಗಿತ್ತು. ಆದರೆ ಫೋಟೋ ತೆಗೆಯಿಸುವ ಸಂಭ್ರಮದಲ್ಲಿ ಶಾಮರಾಯನು ಅದೆಲ್ಲವನ್ನೂ ಮರೆತ. ಅಷ್ಟರ ತನಕ ಅಲ್ಲಲ್ಲಿ ಬಿದ್ದುಕೊಂಡಿದ್ದು ಗೆದ್ದಲಿಗೆ ತಿನಿಸಾಗಿದ್ದ ತನ್ನ ಕತೆಗಳಿಗೆಲ್ಲ ಬೆಳಕನ್ನು ಕಾಣುವ ಸುಯೋಗ ಬಂತೆಂದೂ, ತಾನು ಸ್ವತಃ ಅಲ್ಲದಿದ್ದರೂ ಪತ್ನಿಯ ಮೂಲಕ ಹೆಸರು ಪಡೆಯುವೆನೆಂದೂ ಅವನು ಗಾಳಿಗೋಪುರಗಳನ್ನು ಕಟ್ಟತೊಡಗಿದನು. ಆ ರಾತ್ರಿ, ಹಳೆಯ ಕತೆಗಳನ್ನೆಲ್ಲ ಒಟ್ಟುಗೂಡಿಸುವುದರಲ್ಲೇ ಅವನಿಗೆ ನಿದ್ರೆಯಿರಲಿಲ್ಲ.

ಸಮಯಕ್ಕೆ ಸರಿಯಾಗಿ "ಉದಯ"ದ ವಿಶೇಷ ಸಂಚಿಕೆಯೂ ಹೊರಬಿತ್ತು. "ವಿಚಿತ್ರ ಸಂಸಾರ"ವೆಂಬ ನೂತನ ಕತೆ, ಶ್ರೀಮತಿ ರಮಾದೇವಿಯ (ಅಲ್ಲ, ಅವಳಿಗಿಂತ ನೂರುಪಾಲು ಸುಂದರಿಯ) ಭಾವ ಚಿತ್ರ, ಅವಳ ಪರಿಚಯ-ಮುಂತಾದುವುಗಳೊಂದಿಗೆ ಕತೆಯೂ ಪ್ರಕಟ ವಾಯಿತು. ಮೊದಲನೆಯ ಕತೆಯ ಪ್ರಕಟಣೋತ್ಸವವನ್ನು ಬಹಳ

ಡಾಲಿನಿಂದಲೇ ಜರಗಿಸಿದರು ದಂಪತಿಗಳು. ಅಂದು ಮೂರ್ತಿಗೂ ಆಹ್ವಾನವಿತ್ತು.

"ಒಳ್ಳೇಯ ಪ್ಲಾನ್ ಹೇಳಿಕೊಟ್ಟೆಯಲ್ಲ ಮೂರ್ತಿ. ನಿನಗದು ಹೇಗೆ ಗೊತ್ತಾಯಿತು?" ಎಂದು ಶಾಮರಾಯ ಮೂರ್ತಿಯೊಡನೆ ಕೇಳಿದ.

ಅದಕ್ಕೆ ಮೂರ್ತಿಯು "ನಾನು ಕೂಡಾ ಹೀಗೆಯೇ ಮಾಡುತಿದ್ದೇನೆ ಶಾಮು; ಹೆಂಡತಿಯ ಹೆಸರು ಉಪಯೋಗಿಸೋಣವೆಂದರೆ ನನಗೆ ಹೆಂಡತಿಯಿಲ್ಲ........"ಎಂದ.

"ಮಾಡಿಕೊಳ್ಳಬಾರದೇ?" ಎಂದು ಅವನನ್ನು ತಡೆಗಟ್ಟಿದಳು ರಮಾ.

"ಮಾಡಿಕೊಡಂರೆ ಸರಿ. ಅಷ್ಟರವರೆಗೆ ಬೇಕಲ್ಲ.......ವಿಮಲಾ" ಎಂದು ಯಾವುದೋ ಕಾವ್ಯನಾಮದಲ್ಲಿ ನಾನೀಗ ಕತೆ, ಕವನಗಳನ್ನು ಬರೆಯುತಿದ್ದೇನೆ. ಯಾರಿಗೂ ಹೇಳಬೇಡ" ಎಂದ ಮೂರ್ತಿ.

'ಉದಯ'ದ ವಿಶೇಷ ಸಂಚಿಕೆಯ ಮತ್ತೊಂದೆಡೆಯಲ್ಲಿ ವಿಮಲಾ' ಎಂಬ ಕಾವ್ಯನಾಮದೊಂದಿಗೆ ಒಂದು ಕವನವು ಅಚ್ಚಾಗಿತ್ತು.

ರಮಾದೇವಿಯು ಮೂರ್ತಿಗೆ ತಮಾಷೆ ಮಾಡುತ್ತ 'ಹಾಗಾದರೆ ನಿನ್ನನ್ನು ವಿಮಲಾ ಎಂದು ಕರೆದರೆ ಬೇಸರವಿಲ್ಲವಷ್ಟೆ. ಚಲೋ ಹೆಸರು ಕಣೊ' ಎಂದಳು.

'ಈ ಕಾಲದಲ್ಲಿ ಗಂಡಸರ ಲೇಖನಿಗಿಂತ ಹೆಂಗುಸರ ಲೇಖನಿಗೆ ಬೆಲೆ ಹೆಚ್ಚು. ಹಿಂದೊಮ್ಮೆ ಇಂಗ್ಲಾಂಡಿನಲ್ಲಿ ಯಾವಳೊ ಒಬ್ಬ ಹೆಂಗಸು 'ಜೊರ್ಜ್ ಈಲಿಯಟ್' ಎಂಬ ಗಂಡು ಕಾವ್ಯನಾವನ್ನು ಧರಿಸಿ ಬರೆದಳಂತೆ. ಆಗ ಹೆಂಗಸರ ಲೇಖನಿಗಿಂತ ಗಂಡಸರ ಲೇಖನಿಗೆ ಬೆಲೆ ಹೆಚ್ಚಿದ್ದಿರಬೇಕು. ಕಾಲಕ್ಕೆ ತಕ್ಕ ಕೋಲ, ಅಷ್ಟೆ!' ಎಂದು ಮೂರ್ತಿ ನಾಚಿ ಉತ್ತರಕೊಟ್ಟ.

ಅನಂತರ ಕೆಲವು ದಿನಗಳವರೆಗೆ ಆಫೀಸಿನಿಂದ ಬಂದ ಶಾಮುರಾಯನಿಗೆ ತನ್ನ ಹಳೆಯ ರಿಕಾರ್ಡಿನ ಕತೆಗಳ ಪ್ರತಿಗಳನ್ನು ತೆಗೆದು ನಾಡಿನ ಪತ್ರಿಕೆಗಳಿಗೆಲ್ಲ ಕಳುಹಿಸುವುದೊಂದೇ ಕೆಲಸ. ಯಾವ ಪತ್ರಿಕೆಯನ್ನು ತೆಗದರೂ ಅದರಲ್ಲಿ ಶ್ರೀಮತಿ ರಮಾದೇವಿಯುವರ 'ಚಲೋ ಕತೆ'.

ಬರಬರುತ್ತ, 'ಈ ಸಂಚಿಕೆಗೆ–ಆ ಸಂಚಿಕೆಗೆ' ಎಂದು ಪ್ರತಿಯೊರ್ವ ಸಂಪಾದಕನು ಶ್ರೀಮತಿ ರಮಾದೇವಿಗೆ ಬೇಡಿಕೆಗಳನ್ನು ಕಳುಹಿಸತೊಡಗಿದ. ರಮಾದೇವಿಯ ಹೆಸರು ಸಾಹಿತ್ಯಕ್ಷೇತ್ರದಲ್ಲಿ ಮೂಲೆಮೂಲೆಗಳಿಗೂ ವ್ಯಾಪಿಸಿತು. ಅದರ ಪರಿಣಾಮವಾಗಿ, ೩೫ ರೂ. ಗಳ ಸಂಬಳದಲ್ಲಿ ಕಾಲಕ್ಷೇಪಮಾಡುತಿದ್ದ ಶಾಮರಾಯನಿಗೆ ಹೆಂಡತಿಯ ಪತ್ರವ್ಯವಹಾರಕ್ಕಾಗಿಯೇ ತಿಂಗಳಿಗೆ ೫ ರೂ. ತಗಲುವಂತಾಯಿತು. ಅವನ ಬಿಡುವಿಗೂ ಸೊನ್ನೆ ಬಿತ್ತು.

ಅದೊಂದು ರವಿವಾರ ರಮಾದೇವಿ ಹಾಗೂ ಶಾಮರಾಯರು ತಮ್ಮ ಹೊರಕೋಣೆಯಲ್ಲಿ ಕುಳಿತು ಕತೆಗಾರಿಕೆಯ ಕುರಿತು ಹರಟೆಯಾಡುತಿದ್ದರು. ತಮಾಷೆಯ ಮಾತಿಗೆ ಮಾತು ಬಂದು 'ಇಷ್ಟೆಲ್ಲ ಯಾವ ಪ್ರಯೋಜನಕ್ಕೆನ್ನುತ್ತೀರಿ! ಒಂದೇ ಒಂದು ಕಾಸು ಕೂಡ ದೊರೆಯುವಂತಿಲ್ಲವಾದರೆ ಕತೆಗಳನ್ನು ಬರೆದೇನು ಫಲ?' ಎಂದಳು ರಮಾದೇವಿ.

ಅವಕ್ಕೆ ಶಾಮರಾಯನು 'ನೀನರಿಯೆ ರಮಾ, ಮರ್ಯಾದೆ ಮೇಲೋ ಹಣ ಮೇಲೋ ಎಂದು ನೀನು ವಿಚಾರಿಸಿ ನೋಡಬೇಕು' ಎಂದ

ಅಷ್ಟರಲ್ಲಿಯೇ ಅಂಚೆಯ ಜವಾನನು ಒಳಗೆ ಬಂದು, 'ವಸಂತ'ದ ಸಂಚಿಕೆಯೊಂದನ್ನು ಕೊಟ್ಟುಹೋದ. ರಮಾದೇವಿಯು ಉತ್ಸುಕತೆಯಿಂದ ಅದನ್ನು ಬಿಚ್ಚಿ, ಅವಸರದಿಂದ (ತನ್ನ ಅಲ್ಲ, ಶಾಮರಾಯನ) ಕತೆಯೆಲ್ಲಿದೆಯೆಂದು ಹುಡುಕತೊಡಗಿದಳು. ಅದರಲ್ಲಿ 'ಹೊಸ ಮಿತ್ರ' ಎಂಬ ಕತೆಯೊಂದು ಪ್ರಕಟವಾಗಿತ್ತು. ಆದರೆ ಪತ್ರಿಕೆಯವರು ಎಷ್ಟು ಅಜಾಗರೂಕರೋ ಕಾಣೆ–'ರಮಾದೇವಿ' ಎಂದಿರಬೇಕಾಗಿದ್ದ ಲೇಖಕಿಯ ಹೆಸರು 'ರಮಾ ದೇವಿ' ಎಂದು ಬರೆಯಲ್ಪಟ್ಟಿತ್ತು.

'ನೋಡಿದಿರಾ ಪುಕ್ಕಟೆಯಾಗಿ ಕತೆ ಬರೆದು ಕಳುಹಿಸಿದುದಕ್ಕೆ ದೊರೆತ 'ವಸಂತನ ಬಿರುದು' ಒಂದು ಅರೆಮುನಿಸಿನಿಂದ ರಮಾ ನುಡಿದಳು.

'ಅದು ಸಂಪಾದಕರ ತಪ್ಪಲ್ಲ. ಮುದ್ರಣಾಲಯದಲ್ಲಿ ಕಂಪೋಜಿಟರರೆಂಬವರಿರುತ್ತಾರೆ. ಅವರ ಅಜಾಗರೂಕತೆಯಿದು. ಮುದ್ರಣ

ಭೂತವೆನ್ನುತ್ತಾರೆ ಇದಕ್ಕೆ. ಇದನ್ನು ತಪ್ಪಿಸಲು ಬ್ರಹ್ಮನಿಂದಲೂ ಸಾಧ್ಯವಿಲ್ಲ. 'ದೇವಿ'ಯೆಂಬುದರ ಬದಲಾಗಿ 'ದೋಸೆ' ಎಂದು ಬೀಳದಿದ್ದುದೇ ನಿನ್ನ ಪುಣ್ಯವೆಂದು ತಿಳಿದುಕೊ" ಎಂದು ಶಾಮರಾಯನು ತನ್ನ ಹೆಂಡತಿಯನ್ನು ಸಂತವಿಸಿದ.

ದಿನಹೋದಂತೆ ರಮಾದೇವಿಗೆ (ಅಲ್ಲ, ಅವಳ ಪತಿ ಶಾಮರಾಯನಿಗೆ) ಸಂಪಾದಕರ ಕಾಟ ವಿಪರೀತವಾಗತೊಡಗಿತು. ಸಾಲದುದಕ್ಕೆ, ಶಾಮರಾಯನು ಮನೆಯಲ್ಲಿಲ್ಲದಾಗ, ಅನೇಕ ಕಿರಿಯರು ಬಂದು, 'ನಮ್ಮ ಹಸ್ತಲಿಖಿತ ಪತ್ರಿಕೆಗೊಂದು ಕತೆಕೊಡಿ.' 'ನಮ್ಮ ಪತ್ರಿಕೆಗೊಂದು ಮುನ್ನುಡಿ ಬರೆಯಿರಿ'. 'ನಮ್ಮ ಪತ್ರಿಕೆಯ ವಿಮರ್ಶೆ ಮಾಡಿರಿ' ಎಂದು ರಮಾದೇವಿಯನ್ನು ನಾನಾರೀತಿಯಲ್ಲಿ ಕಾಡತೊಡಗಿದರು. ಇಲಿಗೆ ಹೊಡೆದ ಪೆಟ್ಟು ಮೂಷಿಕವಾಹನನಾದ ಗಣಪತಿಗೆ ತಗಲುವುದಂತೆ. ಹಾಗೆಯೇ, ರಮಾದೇವಿಗೆ ಬಂದ ಕಾಟವೆಲ್ಲ ಶಾಮರಾಯನಿಗೆ ವರ್ಗಾಯಿಸಲ್ಪಡುತಿತ್ತು. ಟಪ್ಪಾಲಿನಲ್ಲಂತೂ ಇಂತಹ ಬೇಡಿಕೆಗಳೊಂದಿಗೆ 'ನಮ್ಮ ಸಂಸ್ಥೆಯ ಸದಸ್ಯೆಯಾಗಬೇಕು.' 'ನಮ್ಮ ಸಂಪಾದಕ ಮಂಡಲದಲ್ಲಿ ತಮ್ಮ ಹೆಸರನ್ನು ಸೇರಿಸಲು ಅನುಮತಿಕೊಡಬೇಕು.' ನಮ್ಮ ಕೂಟಕ್ಕೆ ಸದಸ್ಯರು ಸೇರುವಂತೆ ಮಹಿಳೆಯರಲ್ಲಿ ತಾವು ಪ್ರಚಾರಮಾಡಬೇಕು' ಎಂಬಿತ್ಯಾದಿ ಅರಿಕೆಗಳೂ ರಮಾದೇವಿಗೆ ಬರುತಿದ್ದುವು. ಇವೆಲ್ಲ ಬೇಡಿಕೆಗಳಿಗೆ ಉತ್ತರಗಳನ್ನು ಬರೆದು, ಬರೆದು, ವಿಮರ್ಶೆ ಲೇಖನ ಮುಂತಾದುವುಗಳನ್ನು ಕಳುಹಿಸಿ ಕಳುಹಿಸಿ ಶಾಮರಾಯನಿಗೆ ಸಾಕೇ ಸಾಕಾಯಿತು.

ಕ್ರಮೇಣ ರಮಾದೇವಿಗೆ ಸಂಘ ಸಂಸ್ಥೆಗಳಲ್ಲಿ ಭಾಷಣಗಳಿಗೂ ಆಮಂತ್ರಣಗಳು ಬರತೊಡಗಿದವು. ಹೆಂಡತಿಯ ಬದಲಿಗೆ ಗಂಡನು ಲೇಖನಗಳನ್ನು ಗುಟ್ಟಾಗಿ ಬರೆದು ಕಳುಹಿಸಿದನೆಂದು ಸಭೆಯಲ್ಲಿ ನಿಂತು ಭಾಷಣ ಕೊಡಲು ಸಾಧ್ಯವೆ? ಆದ ಕಾರಣ ಒಂದೆರಡು ಬೇಡಿಕೆಗಳನ್ನು ರಮಾದೇವಿಯು ಮನ್ನಿಸಲೇ ಇಲ್ಲ. ಕೊನೆಗೊಂದು ದಿನ ಪತಿಯ ಸಲಹೆಯಂತೆ ಆಕೆ 'ಸಾಹಿತ್ಯಕೂಟ'ವೊಂದರ ವರ್ಧಂತಿಯ ಅಧ್ಯಕ್ಷ ಸ್ಥಾನವನ್ನು ವಹಿಸಲು ಸಮ್ಮತಿಸಿದಳು.

'ನೀನೇಕೆ ಹೆದರುವುದು? ಭಾಷಣವನ್ನು ಸಾದ್ಯಂತವಾಗಿ ನಾನು ಬರೆದುಕೊಟ್ಟರೆ ಸರಿಯಷ್ಟೆ! ನೀನು ಅದನ್ನು ಓದಿ ಚೆನ್ನಾಗಿ ಅಭ್ಯಾಸ ಮಾಡು. ಬೇಕಾದರೆ ಸಭೆಯಲ್ಲಿಯೂ ಅದನ್ನು ಒದಿ ಹೇಳು. ಅದರಲ್ಲೇನು ನಾಚಿಕೆ? ಪಾರ್ಲಿಮೆಂಟಿನ ಸದಸ್ಯರು ಕೂಡಾ ಓದುವರಂತೆ' ಎಂದು ಶಾಮರಾಯನು ತನ್ನ ಹೆಂಡತಿಗೆ ಧೈರ್ಯಕೊಟ್ಟ. ಮರುದಿನ ಮುಂಜಾನೆ, ಬೇಗನೆ ಎದ್ದು, ಭಾಷಣವನ್ನು ಬರೆದುಕೊಟ್ಟು, ಅವನು ಆಫೀಸಿಗೆ ಹೋದ.

ಆ ದಿನ ಆಫೀಸಿನಲ್ಲಿ ಶಾಮರಾಯನಿಗೆ ಕೆಲಸದ ಮೇಲೆ ಕೆಲಸ. ಅದರ ನಡುವೆ ಒಂದು ಫಜೀತಿಯಾಯಿತು. ಅವರ ನೆರೆಮನೆಯ ಒಬ್ಬ ಹುಡುಗನು ಶಾಮರಾಯನನ್ನು ಹುಡುಕಿ ಬಂದು 'ಮಿಸ್ಟರ್ ಶಾಮ ರಾವ್, ನಿಮ್ಮ ಹೆಂಡತಿಗೇನಾದರೂ ಕಾಹಿಲೆಯಿದೆಯೆ? ಕೋಣೆಯ ಕಿಟಕಿ ಬಾಗಿಲುಗಳನ್ನೆಲ್ಲ ಮುಚ್ಚಿದ್ದಾರೆ. ಒಳಗೇನೊ ಜೋರಾದ ಸದ್ದು ಕೇಳಿ ಸುತ್ತದೆ. ಏನು ಮಾಡುತ್ತಿದ್ದಾರೆಂದು ಗೊತ್ತಿಲ್ಲ. ನೀವೊಮ್ಮೆ ಬಂದು ನೋಡುವದುತ್ತಮ' ಎಂದ. ಶಾಮರಾಯನಿಗೆ ಅಂದಿನ ಕಾರ್ಯಾವ ಸರದಲ್ಲಿ ಮುಂಜಾನೆ ತಾನು ಹೆಂಡತಿಗೆ ಭಾಷಣವನ್ನು ಬರೆದುಕೊಟ್ಟ ನೆನಪೇ ಉಳಿದಿರಲಿಲ್ಲ. ಅವನು ಗಾಬರಿಗೊಂಡು ಮನೆಗೆ ಓಡಿಹೋದ. ಅಲ್ಲಿ ನೋಡುತ್ತಾನೆ–ಹುಡುಗನೆಂದಂತೆ, ಅವರು ಮಲಗುವ ಕೋಣೆಯ ಕಿಟಕಿ ಬಾಗಿಲುಗಳೆಲ್ಲ ಮುಚ್ಚಿವೆ. ಒಳಗಿಂದ ರಮಾದೇವಿಯ ಗಟ್ಟಿಯಾದ ಸ್ವರವು ಕೇಳಿಬರುತ್ತದೆ. ಶಾಮರಾಯನಿಗೆ ಇದನ್ನೆಲ್ಲ ಕಂಡು ಆಶ್ಚರ್ಯವಾಯಿತು.

'ರಮಾ, ರಮಾ, ಒಳಗೇನು ಮಾಡುತಿದ್ದೀಯಾ; ಬಾಗಿಲು ತೆರೆ' ಎಂದು ಕೂಗಿದ ಶಾಮರಾಯ.

ಮರುಕ್ಷಣದಲ್ಲಿಯೇ ಒಳಗಿನ ಸದ್ದು ನಿಂತಿತು. ಬಾಗಿಲು ತೆರೆಯಲ್ಪಟ್ಟಿತು. ರಮಾದೇವಿಯು ಗಂಡನನ್ನು ಕಂಡು 'ಏಕೆ ಬಂದಿರಿ? ಆಫೀಸಿಗೆ ರಜೆಯೇ?' ಎಂದು ಕೇಳಿದಳು. ಆಗ ಶಾಮರಾಯನು 'ಓಹೊ, ಭಾಷಣಕ್ಕೆ ತಯಾರು ಮಾಡುತ್ತಿದ್ದೆಯಾ? ನೆರೆಮನೆಯವರೆಲ್ಲ ಏನೋ

ಇರಬೇಕೆಂದು ಕಂಗಾಲಾಗಿದ್ದಾರೆ' ಎಂದ. ರಮಾದೇವಿಯು ಕನ್ನಡಿಯ ಮುಂದೆ ನಿಂತು ತನ್ನ ನಿಲುವು, ಮುಖಭಾವಗಳನ್ನೆಲ್ಲ ತಿದ್ದುತ್ತ ಭಾಷಣ ವನ್ನು ಓದಲು ಅಭ್ಯಾಸ ಮಾಡುತಿದ್ದಳು. ಪತಿಯು ಹಾಗೆ ಹೇಳಿದಾಕ್ಷಣ ಅವಳು ನಾಚಿ ತಲೆ ತಗ್ಗಿಸಿದಳು. 'ಪಾರ್ಲಿಮೆಂಟಿನ ಸದಸ್ಯರು ಕೂಡಾ ಹೀಗೆಯೇ ಮಾಡುತ್ತಾರೆಂದು ನೀವು ಹೇಳುತಿದ್ದೀರಲ್ಲ? ನಾನು ಮಾಡಿ ದುದರಲ್ಲಿ ತಪ್ಪೇನು?' ಎಂದಳು.

ಸರಿ! ಸಾಹಿತ್ಯಕೂಟದ ಅಧ್ಯಕ್ಷ ಪೀಠದಲ್ಲಿ ನಿಂತು ಮಾಡಿದ ರಮಾ ದೇವಿಯ ಪ್ರಥಮ ಭಾಷಣವೇ ಯಶಸ್ವಿಯಾಯಿತೆಂದು ಹೇಳಬಹುದು. ಅದರಿಂದ ರಮಾದೇವಿಗೆ ಸಭೆಗಳಲ್ಲಿ ಮಾತನಾಡುವ ಧೈರ್ಯ ಬಂತು. ಜನರಿಗೂ ಆಕೆಗೆ ಭಾಷಣ ಕೊಡಲು ವಿನಂತಿಸಲಿಕ್ಕೂ ಧೈರ್ಯವುಂಟಾ ಯಿತು. ರಮಾದೇವಿಯು ಲೇಖಿಕೆ ಮಾತ್ರವಲ್ಲ, ಒಳ್ಳೆಯ ವಾಗ್ಮಿಯು ಕೂಡಾ ಹೌದೆಂದು ಜನರು ಹೇಳತೊಡಗಿದರು.

ಅದೊಂದು ದಿನ ಶಾಮರಾಯನು ಆಫೀಸಿಗೆ ತಡವಾಗಿ ಹೋಗಿದ್ದ. ಅವನ ಮೇಲಾಫೀಸರರು ಸಿಟ್ಟಿಗೆದ್ದು ಅವನನ್ನು ತುಂಬಾ ಜರೆದಿದ್ದರು. ಆ ದಿನವೆಲ್ಲ ಆಫೀಸಿನಲ್ಲಿ ಬಾಕಿ ಬಿದ್ದ ಕೆಲಸವೂ ತುಂಬಾ ಇತ್ತು. ಹೀಗಾಗಿ ಶಾಮರಾಯನು ಮನೆಸೇರುವಾಗ ಏಳು ಗಂಟೆಯಾಗಿತ್ತು. ಅವನು ಮನೆಗೆ ಬಂದೊಡನೆ ಕಾಫಿ ಕುಡಿಯುತ್ತಿರುವಾಗಲೇ ಎಂದಿನಂತೆ ರಮಾದೇವಿಯು "ನಾಳೆ ಮಕ್ಕಳ ಕೂಟದಲ್ಲೊಂದು ಭಾಷಣ ಮಾಡಲು ಒಪ್ಪಿರುವೆನು. ಅದಕ್ಕೊಂದು ಭಾಷಣ ತಯಾರಾಗಬೇಕು 'ಬಾಲ ವಾಣಿ'ಯವರಿಗೊಂದು ಮುನ್ನುಡಿ ಬರೆದು ಕೊಡುತ್ತೇನೆಂದು ಹೇಳಿ ಒಂದು ತಿಂಗಳಾಯಿತು. ಹುಡುಗರು ಇಷ್ಟರಲ್ಲೇ ಹತ್ತಿಪ್ಪತ್ತು ಸಲ ಬಂದುಹೋದರು. ಈ ಹೊತ್ತಾದರೂ ಬರೆಯಬೇಕು. 'ಮಹಿಳಾ ಲೋಕ' ಪತ್ರಿಕೆಯವರಿಗೆ ಹೊಸತೊಂದು ಕತೆ ಬೇಕಂತೆ. ಕಾಗದ ಬಂದಿದೆ. ಮರು ಟಪ್ಪಾಲಿಗೇನೆ ಕಳುಹಿಸಿಕೊಡಬೇಕಂತೆ"-ಹೀಗೆ ಬಹು ಮುಖವಾದ ತನ್ನ ಸಾಹಿತ್ಯ ಸೇವೆಯ ಪುರಾಣವನ್ನು ಗಂಡನ ಮುಂದೆ ಬಿಚ್ಚತೊಡಗಿದಳು. ಶಾಮರಾಯನಿಗೆ ಅದೊಂದೂ ಆ ದಿನ ಬೇಡ ವಾಗಿತ್ತು. ಅವನ ಗ್ರಹಗತಿಯೇನೋ ಆ ದಿನ ಚೆನ್ನಾಗಿರಲಿಲ್ಲವೆಂದು

ತೋರುತ್ತೆ. ಆಫೀಸಿನಲ್ಲಿ ಆ ತೊಂದರೆ, ಮನೆಯಲ್ಲಿ ಈ ತೊಂದರೆ. ಜೀವನವೇ ಅವನಿಗೆ ಬೇಡವೆಂದೆನಿಸಿತ್ತು. ಅವನು ಮಾತನಾಡದೆ ಕಾಫಿಯ ಶಾಸ್ತ್ರ ಮುಗಿಸಿ, ಹೊರಗೆ ಬಂದು ಕುಳಿತುಕೊಂಡ.

ರಮಾದೇವಿಯು ಎಂದಿನಂತೆಯೇ ತನ್ನ ಲೇಖನ ಸಾಮಗ್ರಿಗಳನ್ನೂ ಅಂದು ಟಪ್ಪಾಲಿನಲ್ಲಿ ತನಗೆ ಬಂದ ಕಾಗದಗಳೆಲ್ಲವನ್ನೂ ಗಂಡನ ಮುಂದೆ ತಂದು ಸುರುವಿದಳು. ಶಾಮರಾಯನು ಪತ್ರಗಳನ್ನು ಒಂದೊಂದಾಗಿಯೇ ಓದತೊಡಗಿದ. 'ನೋಡಿ, ಇದು ಈ ಹೊತ್ತು ಬಂದ ರಿಜಿಸ್ಟರ್ಡ್ ಪತ್ರ. ಯಾವ ಸಂಪಾದಕನದೋ ಗೊತ್ತಿಲ್ಲ. ಇಂಗ್ಲೀಷಿನಲ್ಲಿದೆ. ನನಗೆ ಅರ್ಥವಾಗುವುದಿಲ್ಲ. ಕನ್ನಡ ಪತ್ರಿಕೆಯ ಸಂಪಾದಕರಿಗೆಲ್ಲ ಪತ್ರವ್ಯವಹಾರ ಇಂಗ್ಲಿಷಿನಲ್ಲಿ' ಎಂದಳು ರಮಾದೇವಿ.

ಶಾಮರಾಯನು ಅದನ್ನು ಓದುತ್ತಿದ್ದಂತೆಯೇ ಮೊದಲೇ ವಿವರ್ಣವಾಗಿದ್ದ ಅವನ ಮುಖವು ಸಂಪೂರ್ಣ ಕಪ್ಪಿಟ್ಟಿತು.

'ರಮಾ, ಇದೇನು ಗೊತ್ತೇ? ಸಂಪಾದಕರ ಪತ್ರವಲ್ಲ - ನಮ್ಮ ಪ್ರಾರಬ್ಧ' ಎಂದು ಮೆಲ್ಲನೆ ಹೇಳಿದ ಶಾಮರಾಯ.

'ಮತ್ತಾರದು? ಎಲ್ಲಿಂದ?' ಅವಸರದಿಂದ ಕೇಳಿದಳು ರಮಾ.

'ಇದು ಸಾಹುಕಾರ ಭೀಮರಾಯರ ಪತ್ರ' 'ಜನಮತ'ದಲ್ಲಿ ಪ್ರಕಟವಾದ 'ನಮ್ಮೂರ ಭೀಮಣ್ಣ' ಎಂಬ ಕತೆ ಅವರಿಗೆ ಅನ್ವಯಿಸುತ್ತದಂತೆ. ಮರುಸಂಚಿಕೆಯಲ್ಲೇ ಕ್ಷಮೆ ಕೇಳಿ, ೧೦೦ ರೂ. ದಂಡ ತೆರದಿದ್ದರೆ ಮಾನನಷ್ಟದ ದಾವೆಗೆ ಗುರಿಮಾಡುತ್ತಾರಂತೆ' ಎಂದ ಶಾಮರಾಯ.

ಗಂಡಹೆಂಡಿರಿಬ್ಬರೂ ಸ್ವಲ್ಪ ಹೊತ್ತು ಮೌನವಾದರು.

'ಸಂಪಾದಕರ ದೃಷ್ಟಿಯಲ್ಲಿ ನಮ್ಮ ಲೇಖನಿಗೆ ಬೆಲೆಯೇ ಇಲ್ಲ. ಇಂತಹದೇನಾದರೂ ನಡೆದಾಗ ತಾನೆ ಲೇಖನ ಕಲೆಯ ಶಕ್ತಿ ಮಹತ್ವಗಳೆಲ್ಲ ಬಯಲಾಗುತ್ತವೆ' ಎಂದ ಶಾಮರಾಯ.

ಆ ರಾತ್ರಿ ಶಾಮರಾಯ ರಮಾದೇವಿಯರಿಗೆ ಊಟವೂ ಇಲ್ಲ, ನಿದ್ದೆಯೂ ಇಲ್ಲ.

---

ಹೊಸಕೆರೆ ಚಿದಂಬರಯ್ಯನವರ



# ಗೀತೆಯ ಕೈಗನ್ನಡಿ

ಕನ್ನಡದಲ್ಲಿ ಭಗವದ್ಗೀತೆಯ ಸಮೂಲ ಶ್ಲೋಕ ಮತ್ತು ಅನುವಾದ.

ಬೆಲೆ 0—12—0

ನವಯುಗ ಪ್ರೆಸ್, ಉಡುಪಿ.
ಅಥವಾ
ನವಭಾರತ ಪುಸ್ತಕ ಭಂಡಾರ, ಉಡುಪಿ.

# ನವಭಾರತ ಪುಸ್ತಕ ಭಂಡಾರ, ಉಡುಪಿ.

## ನಮ್ಮಲ್ಲಿ ಸಿಗುವ 'ಕಿರಿಯರ ಪ್ರಪಂಚ'ದ ಪ್ರಕಟಣೆಗಳು.

**೧ ಸ್ವತಂತ್ರ ಜೀವನೋಪಾಯ** ಬೆಲೆ ೦-೪-೦

ಬರೆದವರು: ಶ್ರೀ. ಕೆ. ಹೊನ್ನಯ್ಯ ಶೆಟ್ಟಿ.

ಜೀವನದ ಹೋರಾಟವನ್ನು ಕಣ್ಣ ಮುಂದಿರಿಸಿ ಸ್ವತಂತ್ರ ಜೀವನ ನಡೆಸುವ ವಿಧಾನವನ್ನು ವಿವರಿಸುವ ಚಿಕ್ಕ ಚೊಕ್ಕ ನಾಟಕ.

"ಸಂವಾದದಲ್ಲೆಲ್ಲ ಪ್ರತಿಯೊಂದು ದೃಶ್ಯದಲ್ಲಿ, ಗಾದೆಗಳೂ ನಾನಾ ಉಪಮೆಗಳೂ ಅವಿರಳವಾಗಿ ಪೋಣಿಸಲ್ಪಟ್ಟವೆ. ಶೈಲಿಯು ಚಲೋದಿದೆ".

—ಕಂಠೀರವ.

**೨ ಸಂಶಯ ಪಿಶಾಚಿ** (ನಾಟಕ) ಬೆಲೆ ೦-೧೦-೦

ಬರೆದವರು: ಶ್ರೀ. ಕೆ. ಕೆ. ಶೆಟ್ಟಿ.

ಅಳಿಯಸಂತಾನ ಕಟ್ಟಿನ, ಮುಖ್ಯವಾಗಿ ಬಂಟ ಸಮಾಜದ ಸದ್ಯದ ನಡವಳಿಕೆಯನ್ನೂ ಅದರಿಂದುಂಟಾಗುವ ದುಷ್ಪರಿಣಾಮಗಳನ್ನೂ ಚಿತ್ತವೇದಕವಾಗಿ ಚಿತ್ರಿಸಿ ಸಮಾಜದೇಳಿಗೆಯ ಮಾರ್ಗವನ್ನು ಸೂಚಿಸುವ ನಾಟಕ.

"ಪಾತ್ರಗಳ ಸಂಭಾಷಣೆಯ ಪ್ರತಿ ಶಬ್ದವೂ ಭಾವಭರಿತವಾಗಿರುತ್ತದೆ. ಇದು ಆಧುನಿಕ ಶೈಲಿಯಿಂದ ಮನೋರಂಜಕವಾಗಿದೆ". —ಸ್ವದೇಶಾಭಿಮಾನಿ.

**೩ ನಾಡಕತೆಗಳು** (ಕಥಾಸಂಕಲನ) ಬೆಲೆ ೦-೩-೧

ಬರೆದವರು: ವಿವಿಧ ಕತೆಗಾರರು.

ಈ ಪುಸ್ತಕದಲ್ಲಿ ಬೇರೆಬೇರೆ ಜನರು ಬರೆದ ಸಮಾಜದ ಸ್ವಾಭಾವಿಕ ಚಿತ್ರಗಳನ್ನೊಳಗೊಂಡ ಕತೆಗಳಿವೆ. "ತಿರುಪತಿ ಮುಡುಪಿನ ಕಳವು" ಎಂಬುವದರಲ್ಲಿ ಬರುವ ಶೆಟ್ಟರು ಭಟ್ಟರು ಎಲ್ಲೆಲ್ಲಿಯೂ ನೋಡಲು ಸಿಕ್ಕುವರು...... "ಸೆಟ್ರ ಮನೆಯ ಮದುವೆ" ಎಂಬ ಕತೆಯಲ್ಲಿ ಎಡೆಯಾಡುತ್ತಿದ್ದ ಚುಚ್ಚು ನಗೆಯು ವಾಚಕರಿಗೆ ನಗೆಯೊಡನೆ ವೈಜುಮ್ಮನ್ನೂ ಹುಟ್ಟಿಸುವದು..."ಅಂದು ಇಂದು" ಎಂಬುದು ಸೊಗಸಾದ ಸಣ್ಣ ಕಥೆ. ಹೇಳುವ ಮಾತಿನ ರೀತಿಯೂ ಚೆನ್ನಾಗಿದೆ... —ಜಯಕರ್ನಾಟಕ.

**೪ ಕುಶಲವ** (ನವ ಪೌರಾಣಿಕ ನಾಟಕ) ಬೆಲೆ ೦-೮-೦

ಬರೆದವರು: ಶ್ರೀ. ಕೆ. ಕೆ. ಶೆಟ್ಟರು.

ಹಳೆಯ ಕಥೆಯನ್ನು ಹೊಸ ಮಾದರಿಯಲ್ಲಿ ಎರಕ ಹೊಯ್ದು, ಈಗಿನ ಶಿಕ್ಷಣದಲ್ಲಿರುವ ದೋಷಗಳನ್ನು ಎತ್ತಿ ತೋರಿಸಿ, ಸುಧಾರಣೆಯ ಹಾದಿಯನ್ನು ಸೂಚಿಸುವ ನವ ಪೌರಾಣಿಕ ನಾಟಕ.

**೫ ಕಾವ್ಯ ಸಾಮ್ರಾಜ್ಯ** (ದ್ವಿತೀಯಾವೃತ್ತಿ) **ಬೆಲೆ ೧-೮—೦**

ಬರೆದವರು: ವಿವಿಧ ಕವಿಗಳು.

(ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರ ಮುನ್ನುಡಿಯೊಡನೆ.)

"...ಆಧುನಿಕ ಕವಿಗಳ ಕವಿತೆಗಳ ಇಂತಹ ಉತ್ತಮ ಸಂಗ್ರಹವನ್ನು ಈ ವರೆಗೆ ಯಾರೂ ಒದಗಿಸಿಕೊಟ್ಟಿರುವುದಿಲ್ಲ. ಇದಕ್ಕಾಗಿ ಕನ್ನಡಿಗರು "ಕಿರಿಯರ ಪ್ರಪಂಚ"ಕ್ಕೆ ಆಭಾರ ಮನ್ನಿಸಬೇಕು. ಆದರೆ ಶಬ್ದದಿಂದಲ್ಲ; "ಕಾವ್ಯ ಸಾಮ್ರಾಜ್ಯ"ವನ್ನು ಕೊಂಡುಕೊಂಡು ಧನರೂಪದಿಂದ."

—ಸಂಯುಕ್ತ ಕರ್ನಾಟಕ.

"...ಕರ್ನಾಟಕದ ಎಲ್ಲಾ ಪ್ರಾಂತ್ಯಗಳ ಕವಿಗಳ ಕೃತಿಗಳೂ ಇಲ್ಲಿ ಆಯ್ದು ಸೇರಿಸಲ್ಪಟ್ಟಿವೆ. ಕಥಕ, ವರ್ಣಕ, ಭಾವೋದ್ಯೋತಕವಾದ ಎಲ್ಲಾ ಬಗೆಯ ಕವಿತೆಗಳೂ ಸೇರಿವೆ..." —ಪ್ರಬುದ್ಧ ಕರ್ನಾಟಕ.

**೬ ಮಧುವನ** (೨೫ ಕಥೆಗಳ ಸಂಗ್ರಹ) **ಬೆಲೆ ೩ ೦—೦**

ಬರೆದವರು: ವಿವಿಧ ಕತೆಗಾರರು.

"—ಲೇಖಕ ಲೇಖಿಕೆಯರ ಭಾವಚಿತ್ರಗಳು, ಅವರ ಕೃತಿಗಳ ವಿಷಯದಲ್ಲಿ ವಿಮರ್ಶಾತ್ಮಕ ಟಿಪ್ಪಣಿಗಳು ಇವೆಲ್ಲ ಕೂಡಿ ಈ ಪುಸ್ತಕಕ್ಕೆ ಸಹಜವಾಗಿರುವ ಸೊಬಗನ್ನು ಹೆಚ್ಚಿಸಿವೆ. ಕಲೆಯ ದೃಷ್ಟಿಯಿಂದ ಇದೊಂದು ಉಚ್ಚ ತರಗತಿಯ ಕಥಾಸಂಗ್ರಹವಾಗಿದೆ." — ವಿ. ಕೃ. ಗೋಕಾಕ.

**೭ ಮುಂದಿನ ದೇವರು** (ಪ್ರಬಂಧ) **ಬೆಲೆ ೦—೪—೦**

ಬರೆದವರು: ಶ್ರೀ. ಕೆ. ಕೆ. ಶೆಟ್ಟಿ.

ಪುರಾತನದ ಸಮಾಜದ ವ್ಯವಸ್ಥೆ ಹೇಗಿತ್ತು? ಇಂದಿನದು ಯಾವ ರೀತಿಯಲ್ಲಿದೆ? ಮುಂದೆ ಹೇಗಾಗಬೇಕು? ಎಂಬುದನ್ನು ವಿಚಾರಪೂರ್ಣವಾಗಿಯೂ ಸಂಕ್ಷೇಪವಾಗಿಯೂ ವಿವರಿಸುವ ಪ್ರಬಂಧ.

**೮ ವ್ಯಭಿಚಾರಿಣಿ ಯಾರು?** (ನಾಟಕ) **ಬೆಲೆ ೧—೪—೦**

ತಾರುಣ್ಯದುಬ್ಬಿನಿಂದಾದ ಒಂದು ಕ್ಷಣದ ಅವಿವೇಕವನ್ನೇ ಸಮಾಜವು ಪರ್ವತೀಕರಿಸಿ ಓರ್ವ ಸ್ತ್ರೀಯು ಎಷ್ಟೊಂದು ನಿರ್ದುಷ್ಟಳೂ, ನಿಷ್ಕಳಂಕಳೂ ಆದರೂ ಅವಳನ್ನು ಹೇಗೆ ಬಹಿಷ್ಕರಿಸಿ ದೂರೀಕರಿಸುತ್ತದೆ? ಮತ್ತು ಮಾನವಂತತನದ ಸೋಗಿನಿಂದ ನಡೆಯಲ್ಪಡುವ ಅನಾಚಾರವನ್ನು ಹೇಗೆ ಕಡೆಗಣಿಸುತ್ತದೆ? ಎಂಬುದನ್ನು ಹೃದಯಭೇದಕವಾಗಿ ಚಿತ್ರಿಸುವ ವಿಚಾರಕ್ರಾಂತಿಕಾರಕ ನಾಟಕವಿದು. ಪವಿತ್ರ ಪ್ರೇಮವು ಎಂತಹ ಅಪಮಾನ, ನಿಂದೆ, ಕಠಿಣ ಪರೀಕ್ಷೆಗೊಳಗಾದರೂ ಕಟ್ಟ ಕಡೆಗೆ ಅದರ ವಿಜಯವು ನಿಶ್ಚಯವೆಂಬುದನ್ನು ಮನಗಾಣಿಸುವ ಶ್ರೀ. ಕೆ. ಕೆ. ಶೆಟ್ಟರು ಬರೆದ ನವೀನ ಸಾಮಾಜಿಕ ನಾಟಕ.

೯ ಹೆಂಡ್ತಿಗಂಡನಾದರೆ? (ಪ್ರಹಸನ) ಬೆಲೆ ೦ ೪ ೦

ಸ್ತ್ರೀ ಸ್ವಾತಂತ್ರ್ಯವನ್ನು ಮಾರ್ಮಿಕವಾಗಿ ಪ್ರತಿಪಾದಿಸುವ ಬೋಧಪರವೂ, ವಿಚಾರಪರವೂ, ವಿನೋದಪರವೂ ಆದ ಪ್ರಹಸನ. ಬರೆದವರು ಶ್ರೀ. ಕೆ. ಕೆ. ಶೆಟ್ಟರು.

೧೦ ಪುರುಷವಧು! (ಪ್ರಹಸನ) ಬೆಲೆ ೦ ೪ ೦

ಮುದುಕನ ಮದುವೆಯ ಭ್ರಾಂತಿಯನ್ನು ಉಚ್ಚಾಟಣೆ ಮಾಡಲು ನವ ಸುಧಾರಕ ತರುಣರು ಕೆಲವರು ಹೂಡುವ ಹಂಚಿಕೆಯನ್ನು ಚಿತ್ರಿಸುವ ಶ್ರೀ. ಕೆ. ಕೆ. ಶೆಟ್ಟರಿಂದ ರಚಿತವಾದ ಮನೋರಂಜಕ ಪ್ರಹಸನ.

೧೧ ಸನ್ಯಾಸಿಯ ಸೋಗಿನಲ್ಲಿ (ಕಾದಂಬರಿ) ಬೆಲೆ ೦—೧೨ ೦

ವೇಶ್ಯಾ ಪುತ್ರಿಯಾದರೂ ನೀತಿವಂತ ಜೀವನ ನಡೆಸುವ ಮನಸ್ಸುಳ್ಳವಳಾದರೆ ಸಮಾಜವು ಅದಕ್ಕೆ ಹೇಗೆ ಅಡ್ಡಿ ಮಾಡಿ ಅವಳ ಜೀವನವನ್ನು ಕೆಡಿಸಲು ಕಾರಣವಾಗುವುದೆಂಬುದನ್ನು ಹೃದ್ರಾವಕವಾಗಿ ಚಿತ್ರಿಸಿರುವ ನವೀನ ಸಾಮಾಜಿಕ ಕಾದಂಬರಿ. ಬರೆದವರು ಶ್ರೀ ಕೆ. ಕೆ. ಶೆಟ್ಟರು.

೧೨ ನಂದಾದೀಪ (ಕಥಾಸಂಗ್ರಹ) ಬೆಲೆ ೧ ೦—೦

ಬರೆದವರು: ಶ್ರೀ. ಕೊರಡ್ಕಲ್ ಶ್ರೀನಿವಾಸ ರಾಯರು.

"ಸ್ಥಳೀಕ ವಾತಾವರಣದ ಮೇಲಿಂದ ಬರೆಯಲ್ಪಟ್ಟ ಈ ಕಥೆಗಳಂತೂ ಬೋಧಪ್ರದವಾಗಿದ್ದು ಓದುಗರ ಮನಸ್ಸನ್ನು ಮಾರ್ಪಾಟಮಾಡುವಂತಿವೆ"

—ಸಂಯುಕ್ತ ಕರ್ನಾಟಕ.

"ಶ್ರೀ. ಶ್ರೀನಿವಾಸರಾಯರ ಕತೆಗಾರಿಕೆಯಲ್ಲಿ ಕಲಾಪೂರ್ಣತೆಯಿದೆ. ಲೇಖನದ ಶೈಲಿಯಲ್ಲಿ ಇಂಪು, ಮೆಲ್ಪು ಮೈಗೂಡಿದೆ." —ಪ್ರಭಾತ.

೧೩ ದೇಶಭಕ್ತ (ರಾಜಕೀಯ ನಾಟಕ) ಬೆಲೆ ೧ ೪—೦

"ಇದೊಂದು ಸಾಮಾಜಿಕ ನಾಟಕ. ಸಮಾಜದಲ್ಲಿ ನಡೆಯುತ್ತಿರುವ ವಿಷಯಗಳನ್ನೆತ್ತಿಕೊಂಡು ಜನರಿಗೆ ಮುಂದಟ್ಟಾಗುವಂತೆ ಸುಲಭವಾದ ಶೈಲಿಯಲ್ಲಿ ಬೋಧಪ್ರದವಾದ ಈ ನಾಟಕವನ್ನು ಶ್ರೀ. ಕೆ. ಕೆ. ಶೆಟ್ಟರು ಬರೆದಿದ್ದಾರೆ. "ದೇಶಭಕ್ತ"ನು ಹೇಗಿರಬೇಕು? ಅವನ ಧ್ಯೇಯ ಧೋರಣೆಗಳು ಹೇಗೆ ಆದರ್ಶವಾಗಿರಬೇಕು? ಜನತಾ ಜನಾರ್ದನ ಸೇವೆ ಎಂದರೇನು? ಎಂಬುದೇ ಈ ನಾಟಕದ ಮುಖ್ಯ ಗುರಿಯಾಗಿದೆ. ಅದನ್ನು ಕೌಶಲ್ಯದಿಂದ ಚಿತ್ರಿಸಿ, ಸಂಸ್ಥಾನದಲ್ಲಿ ನರೇಂದ್ರರು ಮಾಡುತ್ತಿರುವ ದಬ್ಬಾಳಿಕೆಯ ಭೀಕರ ಚಿತ್ರವನ್ನು ಮುಂದಿಟ್ಟು, ಸಾಗಿಸಿದರೆ ಪ್ರಜಾಸ್ವಾತಂತ್ರವು ಎಲ್ಲೆಲ್ಲಿಯೂ ಸಾಧ್ಯವಿದೆಯೆಂಬುದನ್ನು ಶ್ರೀ. ಶೆಟ್ಟರು ಸಾಕಷ್ಟು ಸ್ಪಷ್ಟಮಾಡಿದ್ದಾರೆ."—ಸಂಯುಕ್ತ ಕರ್ನಾಟಕ.

**೧೪ ಪ್ರೇಮವಿಜಯ** (ನಾಟಕ) ಬೆಲೆ ೧ ೦—೦

ಹಿಂದು ಸಮಾಜದ ಕ್ರಾಂತಿಕಾರಕ, ಹೃದ್ರಾವಕ, ವಿಚಾರಪ್ರಚೋದಕ ನಾಟಕ. ಪವಿತ್ರ ಪ್ರೇಮಕ್ಕೆ ಜಾತಿಮತಗಳ ಭಿನ್ನತೆಯೊಂದು ತಡೆಯಾಗ ಬಾರದು. ತಡೆಯಾಗಿ ನಿಂತಲ್ಲಿ ಅದು ಪ್ರೇಮಪ್ರವಾಹದ ಸೆಳೆತಕ್ಕೆ ಸಿಕ್ಕಿ ನೆಲೆ ತಪ್ಪುತ್ತದೆ-ಎಂಬುದನ್ನು ವಿವರಿಸುವ ಶ್ರೀ. ಕೆ. ಕೆ. ಶೆಟ್ಟರಿಂದ ವಿರಚಿತವಾದ ನಾಟಕ.

**೧೫ ರಂಗಭೂಮಿ** (ನಾಟಕ) ಬೆಲೆ ೦—೧೦—೦

ಬರೆದವರು: ಶ್ರೀ. ಎಸ್. ವೆಂಕಟರಾಜರು.

"ರಂಗಭೂಮಿ"ಯೆಂಬ ಹೆಸರೇ ನಾಟಕದ ನಾಟಕತ್ವವನ್ನು ಸಾರುತ್ತದೆ. ಲೇಖಕರು ನಾಟಕಗಳ ವಸ್ತು, ಪಾತ್ರ, ಸ್ವರೂಪ, ಸನ್ನಿವೇಶ, ಸಂಭಾಷಣೆ, ನಟನೆಗಳ ವಿಷಯ ಸೂಕ್ಷ್ಮವಾದರೂ ವಿಚಾರಗರ್ಭಿತವಾದ ಮುನ್ನುಡಿ ಬರೆದಿದ್ದಾರೆ. ಕಥಾಪಾತ್ರಗಳ ಮೂಲಕ, ಹಲವು ಸನ್ನಿವೇಶಗಳ ಮೂಲಕ, ಸಂಭಾಷಣೆಯ ಮೂಲಕ ನಾಟಕಕಾರರು ಈ ವಿಡಂಬನೆಯನ್ನು ಯಶಸ್ವಿಗೊಳಿಸಲು ಪ್ರಯತ್ನಿಸಿದ್ದಾರೆ. —ಸ್ವದೇಶಾಭಿಮಾನಿ.

**೧೬ ಸೇವಾಪಥ** (ನಾಟಕ) ಬೆಲೆ ೦—೮—೦

ಮೂಲ ಲೇಖಕರು: ಶೇಠ್ ಗೋವಿಂದ ದಾಸ್, ಎಂ. ಎಲ್. ಎ., ಸೆಂಟ್ರಲ್.

ಅನುವಾದಕರು: ಶ್ರೀ. ಎಸ್. ಎಲ್. ಸುಬ್ರಹ್ಮಣ್ಯಂ.

"ಸೇವಾಪಥ"ದ ಕಥೆ-ಭಾರತದ ಆಧುನಿಕ ರಾಜಕೀಯ ವಾತಾವರಣದಿಂದ ಕಲ್ಪಿತವಾದುದು. ಮೂವರು ವಿದ್ಯಾವಂತ ಯುವಕರು ಬೇರೆ ಬೇರೆ ಆದರ್ಶಗಳನ್ನು ಹಿಡಿದು ಸಾಗುತ್ತಾರೆ. ಕೊನೆಗೆ ಮೂವರೂ ತಮ್ಮ ಆದರ್ಶಗಳ ಉಚ್ಚ ನೀಚತೆಗಳನ್ನು ಅರಿತುಕೊಳ್ಳುತ್ತಾರೆ." —ಸ್ವದೇಶಾಭಿಮಾನಿ.

**೧೭ ನಾರೀಹೃದಯ** (ಕಥೆಗಳು) ಬೆಲೆ ೧—೮—೦

ಲೇಖಿಕೆ: ಶ್ರೀಮತಿ ಶಿವರಾಣಿ ದೇವಿ.

ಅನುವಾದಕರು: ಶ್ರೀ. ಎಸ್. ಎಲ್. ಸುಬ್ರಹ್ಮಣ್ಯಂ.

"ಹಿಂದಿಯಲ್ಲಿ ಪ್ರಸಿದ್ಧ ಕಥೆಗಾರರೆಂದು ಹೆಸರುಪಡೆದ ಸ್ವರ್ಗೀಯ ಪ್ರೇಮಚಂದ್ರರ ಧರ್ಮ ಪತ್ನಿ ಶ್ರೀಮತಿ ಶಿವರಾಣಿ ದೇವಿಯವರ ಹದಿನಾಲ್ಕು ಕಥೆಗಳ ಕನ್ನಡ ಅನುವಾದವಾದ "ನಾರೀಹೃದಯ"ವನ್ನು ಪ್ರಕಟಿಸಿ "ಕಿರಿಯರ ಪ್ರಪಂಚ"ವು ನಾರೀ ಪ್ರಪಂಚಕ್ಕೆ ಗೌರವ ಮತ್ತು "ಶಿವಶ್ರೀ" ತೋರಿರುವುದು ಸಮಂಜಸವಾಗಿದೆ. ಅನುವಾದ ತೃಪ್ತಿಕರವಾಗಿದೆ. ಪುಸ್ತಕದ ಅಚ್ಚು ಮತ್ತು ಕಟ್ಟು ಚೆಲುವಾಗಿವೆ". —ಸ್ವದೇಶಾಭಿಮಾನಿ.

## ೧೮ ಭಾರತೀಯ ಕಥೆಗಳು (ಕತೆಗಳು) ಬೆಲೆ ೧—೧೨—೦

ಶ್ರೀ. ಎ. ಎಸ್. ಪಿ. ಐಯ್ಯರ್, ಎಂ.ಎ., ಐ.ಸಿ.ಎಸ್., ಬಾರ್. ಎಟ್. ಲಾ., ಎಫ್. ಆರ್. ಎಸ್. ಎಲ್., ಇವರು ಇಂಗ್ಲಿಷಿನಲ್ಲಿ ಬರೆದ Tales of Ind ಎಂಬ ಕಥಾವಳಿಯ ಕನ್ನಡ ಅನುವಾದ.

ಅನುವಾದಕರು: ಶ್ರೀ. ಕೊರಡ್ಕಲ್ ಶ್ರೀನಿವಾಸ ರಾಯರು.

ಪ್ರತಿಯೊಬ್ಬನಿಗೂ ತನ್ನ ಸಾಮಾಜಿಕ ಹಾಗೂ ವ್ಯಾವಹಾರಿಕವಾದ ಮಾತುಗಾರಿಕೆಯು ಸ್ವಾರಸ್ಯವಾಗಿ ಪರಿಣಾಮಕಾರಿಯಾಗಬೇಕೆಂಬ ಹಿರಿಯಾಸೆ ಇದ್ದೇ ಇದೆ. ಇದು ಸಿದ್ಧಿಸಬೇಕಾದರೆ ಮಾತಿನ ನಡುನಡುವೆ ಸಂದರ್ಭೋ‍ಚಿತವಾದ ಉಪಮೆ, ಗಾದೆ, ಕಥೆ, ದೃಷ್ಟಾಂತ ಇತ್ಯಾದಿಗಳು ಬರಬೇಕು. ಅಂತಹ ಅಮೂಲ್ಯ ಭಂಡಾಗಾರವೇ ಈ ಗ್ರಂಥ. ಭಾರತೀಯ ಜನ ಜೀವನವನ್ನು ಚಿತ್ರಿಸುವ ಚಿಕ್ಕ ಚಿಕ್ಕ ಮನೋಹರ ಕತೆಗಳು.

## ೧೯ ಪ್ರಕಾಶ (ಸಾಮಾಜಿಕ ನಾಟಕ) ಬೆಲೆ ೨—೮—೦

ಮೂಲಲೇಖಕರು: ಶೇಠ್ ಗೋವಿಂದದಾಸ್, ಎಂ.ಎಲ್.ಎ.

ಅನುವಾದಕಿ: ಶ್ರೀಮತಿ ಸರಸ್ವತಿಬಾಯಿ ರಾಜವಾಡೆ.

ಹಿಂದೀ ಸಾಹಿತ್ಯದ ವಿದ್ವಾಂಸರೂ, ಶ್ರೇಷ್ಠ ನಾಟಕಕಾರರೂ, ಉಚ್ಚತರಗತಿಯ ಕಲಾಕಾರರೂ ಆದ ದೇಶಭಕ್ತ ಗೋವಿಂದದಾಸರ ನಾಟಕವೆಂದ ಮೇಲೆ ಹೆಚ್ಚಿಗೆ ಹೇಳತಕ್ಕದೇನೂ ಇಲ್ಲ. ಭಾವನೆ, ವಿಚಾರ ಮತ್ತು ಮಾನವೀಯ ಅನುಭೂತಿಗಳಿಂದ ತುಂಬಿ ತುಳುಕುತ್ತಿರುವ ಹೊಸ ಪ್ರಕಾಶ ಬೀರುವ ರಾಜಕೀಯ–ಸಾಮಾಜಿಕ ನಾಟಕ.

## ೨೦ ಮೂರು ಪ್ರಹಸನಗಳು ಬೆಲೆ ೧ ೪ ೦

ಬರೆದವರು: ಶ್ರೀ. ಕೊರಡ್ಕಲ್ ಶ್ರೀನಿವಾಸರಾಯರು.

ಓದಿದರೂ ಅಭಿನಯಿಸಿದರೂ ಸ್ವಾರಸ್ಯವಾಗಿ ತೋರುವ ಮೂರು ಪ್ರಹಸನಗಳ ಸಂಗ್ರಹ. ನಗಿಸಿ, ವಿಚಾರವೆಬ್ಬಿಸುವ, ವಿಚಾರವೆಬ್ಬಿಸಿ ನಗಿಸುವ ಸಾಮಾಜಿಕ ವ್ಯಕ್ತಿ ಸನ್ನಿವೇಶಗಳು ನಿಮ್ಮ ಕಣ್ಮುಂದೆ ಬಂದು ನಿಂದಂತಾಗುತ್ತದೆ. ನೀವು ಈ ಪುಸ್ತಕವನ್ನು ತೆರೆದರೆ ಪೂರಾ ಓದದೆ ಕೆಳಗಿಡುವಂತಿಲ್ಲ. ಹಾಗಿವೆ ಕೊರಡ್ಕಲ್ಲರ ಲೇಖನಿಯ ವೈಖರಿ, ವಿಚಾರ, ಸರಣಿ, ಶೈಲಿಯ ಸ್ವಾರಸ್ಯ ಈ ಪುಸ್ತಕದಲ್ಲಿ.

**೨೧ ನಗೆನೋಟಗಳು** **ಬೆಲೆ ೧ ೪-**

ಬರೆದವರು: ಕೆ. ವಿಟ್ಠಲ ಶೆಣೈ, ಬಿ. ಎ, ಎಲ್. ಟಿ.

ನಗಿಸಿ ನಗಿಸಿ ವಿಚಾರವೆಬ್ಬಿಸುವ ೧೧ ಜೀವನ ಚಿತ್ರಗಳ ಸಂಗ್ರ
ಭಿನ್ನ ಭಿನ್ನ ವ್ಯಕ್ತಿಗಳ ಬೇರೆ ಬೇರೆ ಸ್ವಭಾವಗಳನ್ನು ಕನ್ನಡಿಯಿಟ್ಟು ಹೊಳೆ
ಸುವ ವಿನೋದಪ್ರದವೂ ಬೋಧಪ್ರದವೂ ಆದ ನಗೆನೋಟಗಳ ಗೊಂಚಲು.

**೨೨ ಅನ್ನದೇವರು ಮತ್ತು ಇತರ ಕತೆಗಳು** **ಬೆಲೆ ೧-೦-**

ಬರೆದವರು: ಕಯ್ಯಾರ ಕಿಞ್ಞಣ್ಣ ರೈ, ವಿದ್ವಾನ್.

ಜೀವನದಲ್ಲಿ ಕಂಡ ಕೆಲವು ನೋಟಗಳು, ಎದುರಿಸಿದ ಸಮಸ್ಯೆಗ
ಪಡೆದ ಕೆಲವು ಅನುಭವಗಳು ಪ್ರೇರಕವಾಗಿ ಲೇಖಕರು ಈ ಕತೆಗಳನ್ನು
ದಿದ್ದಾರೆ. ಕತೆಗಳು ಬೋಧಪ್ರದವಾಗಿವೆ, ವಿಚಾರ ಪ್ರಚೋದಕವಾಗಿ
೧೪ ಕತೆಗಳ ಉತ್ತಮ ಕತಾ ಸಂಗ್ರಹ.

**೨೩ ಭಾರತದಲ್ಲಿ ಜಾತಿ ಭೇದ** **ಬೆಲೆ ೧-೦-**

ಮೂಲ ಲೇಖಕರು: ಆಚಾರ್ಯ ಕ್ಷಿತಿ ಮೋಹನ ಸೇನ್ ಶಾಸ್ತ್ರಿ, ಎಂ.

ಅನುವಾದಕರು: ಎಸ್. ಎಲ್. ಸುಬ್ರಹ್ಮಣ್ಯಂ.

ಭಾರತದ ಬಹಳ ದೊಡ್ಡ ಮತ್ತು ಅನನ್ಯ ಸಾಧಾರಣ ಸಮಸ್ಯೆಯ
ಜಾತಿಭೇದದ ಶಾಸ್ತ್ರೀಯವೂ ವೈಜ್ಞಾನಿಕವೂ ಆದ ವಿವೇಚನೆ. ಶಾಸ್ತ್ರೀಯ ವಿಕಾ
ವೈಜ್ಞಾನಿಕ ಆಧಾರ ವ ತ್ತು ಧಾರ್ಮಿಕ ಪ್ರಭಾವ ಇವೆಲ್ಲವೂ ಇದರಲ್ಲಿ ವಿಮ
ಸಲ್ಪಟ್ಟವೆ. ಇಂತಹ ಶಾಸ್ತ್ರೀಯ ಗ್ರಂಥ ಕನ್ನಡದಲ್ಲಿ ಈವರೆಗೆ ಪ್ರಕಟವಾಗಿ

**೨೪ ವಿಷ್ಣುವಿನ ದಶಾಪರಾಧಗಳು ಅರ್ಥಾತ್ ದಶಾವತಾರಗ**

ಬರೆದವರು: ಶ್ರೀ. ಎಂ. ವಿ. ಹೆಗ್ಡೆ. **ಬೆಲೆ ೦-೧೨-**

ಹೃದಯ ತಂತಿಯನ್ನು ಮೀಂಟುವ, ಭಾವನಾತರಂಗಗಳನ್ನೆಬ್ಬಿಸ
ವಿಡಂಬನೆ. ಓದಲೇ ಬೇಕಾದ ಕನ್ನಡದಲ್ಲಿ ತೀರ ನೂತನ ರೀತಿಯ ವಿಮರ್ಶ

**೨೫ ಆಕಾಶಗಂಗೆ (೨೦ ಕತೆಗಳ ಸಂಗ್ರಹ)** **ಬೆಲೆ ೨-೮-**

ಬರೆದವರು: ಶ್ರೀ. ಯಸ್. ವೆಂಕಟರಾಜ.

ಕರ್ನಾಟಕದ ಸುಪ್ರಸಿದ್ಧ ಸಾಹಿತಿಗಳಾದ ಶ್ರೀ. ವೆಂಕಟರಾಜರು ಕ
ಗಳಲ್ಲಿ ಹೇಗೋ ಕತೆಗಳಲ್ಲಿಯೂ ಹಾಗೆಯೇ "ಪ್ರಪಂಚದ"ಲ್ಲಿ ತನ್ನ
ಕಾಣಲೂ ಬಲ್ಲರು—"ತನ್ನಲ್ಲಿ ಪ್ರಪಂಚ"ವನ್ನು ಕಾಣಲೂ ಬಲ್ಲರು. ಪ್ರಪ
ದೊಡನೆ ತಾದಾತ್ಮ್ಯಗೊಂಡುವ ಮೂಲಕ ವೈಯಕ್ತಿಕ ವ್ಯಕ್ತಿತ್ವವನ್ನು
ಕೊಂಡ ಸಾಹಿತಿ ಇವರು. ಇವರ ಸಾಹಿತ್ಯಪ್ರಭಾನವಾದ ೨೦ ಕತೆಗಳ ಹ
ಯವನ್ನು ಕಲುಕಿಸುವ ಉತ್ತಮ ಕತೆಗಳ ಸಂಗ್ರಹ.

**೨೬ ಸ್ವಾತಂತ್ರ್ಯವೀರ ಸಾವರ್ಕರರು ಬೆಲೆ ೧—೪—೦**

ಮೂಲ ಲೇಖಕರು: ಪಂಡಿತ ಚಂದ್ರಗುಪ್ತ ವೇದಾಲಂಕಾರ.

ಅನುವಾದಕಿ: ಶ್ರೀಮತಿ ಇಂದಿರಾಬಾಯಿ.

ದೇಶದ ಯುವಕರಲ್ಲಿ ನವಜೀವನದ ಸಂಚಾರವನ್ನುಂಟುಮಾಡಿ, ಅವರಲ್ಲಿ ತ್ಯಾಗ ಮತ್ತು ದೇಶಭಕ್ತಿಗಳ ಭಾವನೆಯೊಡನೆ ಹಿಂದುತ್ವದ ಜ್ಯೋತಿಯನ್ನೂ ಪ್ರಜ್ವಲಿಸಿ ದೇಶವನ್ನು ನಿಜವಾದ ರಾಷ್ಟ್ರೀಯತ್ವದ ಮಾರ್ಗದಲ್ಲಿ ಕರೆದೊಯ್ಯಲು ಸಹಾಯಕವಾಗುವ ವೀರ ಸಾವರಕರರ ಜೀವನ ಚರಿತ್ರೆ.

**೨೭ ಜೀವನ ಸಂಗ್ರಾಮ (ಸಾಮಾಜಿಕ ನಾಟಕ) ಬೆಲೆ ೧—೮—೦**

ಬರೆದವರು: ಶ್ರೀ. ಪಿ. ಶೀನ ಶೆಟ್ಟಿ.

ಜನಸಾಮಾನ್ಯರ ಮನಸ್ಸಿಗೆ ಮುಟ್ಟುವಂತೆ ತೊಡಕಿಲ್ಲದೆ ಅಭಿನಯಿಸಲಾಗುವ ನವೀನ ಸಾಮಾಜಿಕ ನಾಟಕ. ಓದುವಾಗ ವಾಚಕರನ್ನೂ, ಅಭಿನಯಿಸುವಾಗ ಪ್ರೇಕ್ಷಕರನ್ನೂ ಆಕರ್ಷಿಸಿ, ಒಲಿಸಿ, ನಗಿಸುವ ನವರಸಭರಿತ ನಾಟಕ. ಹಲವಾರು ಕಡೆಗಳಲ್ಲಿ ಹಲವಾರು ಬಾರಿ ಅಭಿನಯಿಸಲ್ಪಟ್ಟು ಜನಮೆಚ್ಚಿಗೆ ಪಡೆದಿದೆ.

**[illegible] (೧೨ ಕತೆಗಳು) ಬೆಲೆ ೧—೪—೦**

[illegible] ಶ್ರೀಮತಿ ಸರಸ್ವತೀ ಬಾಯಿ ರಾಜವಾಡೆ (ಗಿರಿಬಾಲೆ)

[illegible]ುತ್ತ ಧ್ಯೇಯದಿಂದ ಬರೆಯಲ್ಪಟ್ಟ ಮನೋಹರ ಕತೆಗಳ ಸಂಗ್ರಹ. ಹೆಂಗಸರ ಸೂಕ್ಷ್ಮ ಮನೋವೇದನೆಗಳನ್ನು ಈ ಕತೆಗಳಲ್ಲಿ ಅನುಭವಿಸಬಹುದು. ಭಾವಪೂರ್ಣ ಮತ್ತು ಅರ್ಥಪೂರ್ಣ ಕತೆಗಳ ನವೀನ ಸಂಗ್ರಹ.

**೨೯ ಕವಿತಾಕಾಮಿನಿ (೭೫ ಕವನಸಂಗ್ರಹ) ಬೆಲೆ ೨—೦—೦**

ಬರೆದವರು ಶ್ರೀ. ಯಸ್. ವೆಂಕಟರಾಜ.

ಕಲ್ಪನಾತೀತ ಮಾಧುರ್ಯದಿಂದೊಡಗೂಡಿದ ೭೫ ಕವನಗಳ ಸಂಗ್ರಹ. ಅನಂತ ಸೌಂದರ್ಯದ ಸ್ರೋತವನ್ನು ಕಂಡ ಕವಿಯ ನವೀನ ಸೃಷ್ಟಿ ಇದು. ಅತ್ಯಪೂರ್ವವೂ, ಅತ್ಯಮೂಲ್ಯವೂ ಆದ ಕವಿತಾ ಕಾಮಿನಿ ಸ್ವಾಗತಾರ್ಹವಿದೆ.

**೩೦ ಸ್ವರಾಜ್ಯ ವಿಜಯ** **ಬೆಲೆ ೦—೮—**

ಬರೆದವರು: ಶ್ರೀ. ಎಂ. ವಿ. ಹೆಗ್ಡೆ.

ಕೂಲಿಗಾರ ಸರಕಾರವು ಹಿಂದೀ ಸಮಸ್ಯೆಯನ್ನು ತೀರ್ಮಾನಿಸ ತೊಡಗಿದಂದಿನಿಂದ, ಭಾರತ-ಪಾಕಿಸ್ತಾನ ನಿರ್ಮಿಸಿ, ಸ್ವರಾಜ್ಯ ದಾನಮಾಡಿ ವರೆಗಿನ ಘಟನೆಗಳನ್ನು ಜನಸಾಮಾನ್ಯರಿಗೂ ತಿಳಿಯುವಂತೆ ಬರೆದ ನವಿ ರೀತಿಯ ಯಕ್ಷಗಾನ ನಾಟಕ. "ಸ್ವರಾಜ್ಯ ವಿಜಯ"ದೊಂದಿಗೆ ಹುಟ್ಟಿದ ಕೃತಿಯು ಯಾವ ಸಂದರ್ಭಗಳಲ್ಲೂ ಅಭಿನಯಿಸಲೂ ಓದಲೂ ಯೋಗ್ಯವಿದೆ.

**೩೧ ಸಪ್ತಸಾಗರ** (ಏಳು ಕತೆಗಳು) **ಬೆಲೆ ೦—೧೨—**

ಬರೆದವರು: ಶ್ರೀ. ಯಸ್. ವೆಂಕಟರಾಜ.

ಭಾವನಾಮಯವಾದ ಏಳು ಕತೆಗಳ ಸಂಗ್ರಹ. ಜೀವನದ ಒಪ್ಪು ತಪ್ಪುಗಳ ಸಮತೂಕದ ಮನವರಿಕೆಯನ್ನುಂಟುಮಾಡುವ ಸುರಸ-ಸುಂದ ಕತೆಗಳು.

**೩೨ ಜಮೀನ್ದಾರ** (ಕಾದಂಬರಿ) **ಬೆಲೆ ೧—೮—**

ಮೂಲಲೇಖಕರು: ಪ್ರೊ. ಇಂದ್ರ, ವಿದ್ಯಾವಾಚಸ್ಪತಿ.

ಅನುವಾದಕರು: ವಿದ್ವಾನ್ ಹೊಸಮನೆ ಗುಡ್ಡಪ್ಪ.

ಹಿಂದೀ ಸಾಹಿತ್ಯದಲ್ಲಿ ಹೆಸರು ಪಡೆದ ಪ್ರೊ. ಇಂದ್ರರ ಸ್ವರಲ್ಲಿ ಪ್ರಾರಕ ವಿಚಾರಪ್ರಚೋದಕ ಕಾದಂಬರಿಯೆಂದ ಮೇಲೆ ಹೆಚ್ಚಿಗೆ ಹೇ ಪ್ರಕಟವಾಗಿಲ್ಲ ವಶ್ಯಕ. ದೊಡ್ಡವರ ದರ್ಪ, ದೀನದರಿದ್ರರ ಪರಿತಾಪ ಚಿತ್ತವೇದಕ ಕಾದಂಬರಿ. ಶಾವತಾರಗಳ

**೩೩ ಬಾಳಿನ ಬೆಡಗು** (ಕಾದಂಬರಿ) **ಬೆಲೆ ೦—೧೨—**

ಬರೆದವರು: ಶ್ರೀ. ಯು. ನಾರಾಯಣ ಭಟ್ಟ.

ಸರಳವಾದ ಶೈಲಿಯಲ್ಲಿ ಬರೆಯಲ್ಪಟ್ಟ ಸಂತೋಷಾಂತ ಸಾಮಾಜಿಕ ಕತೆ ಓದುಗರ ಕುತೂಹಲವನ್ನು ಕೆರಳಿಸಿ ಒಮ್ಮೆ ಆರಂಭಿಸಿದರೆ ಕೊನೆಯವರೆಗು ಬಿಡದೆ ಓದಿ ಮುಗಿಸಬೇಕೆನಿಸುವ ಮರ್ಮಭೇದಕ ಕಾದಂಬರಿ. ಸ್ತ್ರೀಪುರು ರೆಲ್ಲರೂ ಓದಲೇಬೇಕಾದ ಆದರ್ಶ ಜೀವನವೊಂದರ ಚಿತ್ರ.

---

ಇತರ ಪುಸ್ತಕಗಳೂ ದೊರೆಯುತ್ತವೆ.

---

ವಿಕ್ರಯಾಧಿಕಾರಿಗಳು:

**ನವಭಾರತ ಪುಸ್ತಕ ಭಂಡಾರ, ರಿಜಿಸ್ಟರ್ಡ್ ಪಬ್ಲಿಷರ್ಸ್, ಉಡುಪಿ**

# ಜರಮುಕಿಗಾನಿ

ವಿಕ್ರಯಾಧಿಕಾರಿಗಳು:
**ನವಭಾರತ ಪುಸ್ತಕ ಭಂಡಾರ,**
ಉಡುಪಿ.